# ಮಾನಸಿ

ಅಕ್ಟೋಬರ್ 2002

ತಿಂಗಳ ಪತ್ರಿಕೆ

- ಮಹಿಳೆಯರು ರಾಮಾಯಣವನ್ನು ಮತ್ತೆ ಹೇಳಿದಾಗ ...
- ನದಿಯ ಮಾತಿಗೆ ಕಿವಿಗೊಡುವ ಸೂಕ್ಷ್ಮತೆ ಇರಬೇಕು
- ಸಂಘ ನಮ್ಮ ಶಕ್ತಿ - ಮಿಲಿನ್ ರಾನಡೆ

# ಮಾನಸ

ತಿಂಗಳ ಪತ್ರಿಕೆ ಅಕ್ಟೋಬರ್ 2002
ಸಂಪುಟ 17 ಸಂಚಿಕೆ : 9





**ವಿಳಾಸ**
**" ಮಾನಸ ತಿಂಗಳ ಪತ್ರಿಕೆ "**
**ಪಂಚಾಯಿತಿ ರಸ್ತೆ**
**ಕಾಡುಗೋಡಿ ಪೋಸ್ಟ್**
**ಬೆಂಗಳೂರು - 560 067**
**ಇ-ಮೈಲ್** : manasapathrike@yahoo.co.in



ಸೂಚನೆ: ಬಿಡಿಪ್ರತಿ 5-00 ರೂ.
ವಾರ್ಷಿಕ ಚಂದಾ 50-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ...


ಮಹಿಳೆಯರು ರಾಮಾಯಣವನ್ನು ಮತ್ತೆ ಹೇಳಿದಾಗ

**- ಡಾ. ವೆಂ. ವನಜ**, ಮೈಸೂರು.

ನದಿಯ ಮಾತಿಗೆ ಕಿವಿಗೊಡುವ ಸೂಕ್ಷ್ಮತೆ ಇರಬೇಕು

ಸಂಘ ನಮ್ಮ ಶಕ್ತಿ

**- ಮಿಲಿನ್ ರಾನಡೆ**





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ರಾಯಚೂರಿನ ಪೋತನಾಳ್‌ನಲ್ಲೊಂದು ಸಭೆ ಹತ್ತಿಪ್ಪತ್ತು ಹಳ್ಳಿಯ ಮಹಿಳೆಯರು. ಮಳೆ ಇಲ್ಲ, ಬೆಳೆ ಇಲ್ಲ ಹಾಗಾಗಿ ಕೂಲಿಯೂ ಇಲ್ಲ. ಇರುವ ಮೂರ್‍ಕಾಸಿನಲ್ಲಿ ಎರಡುಸೇರು ನುಚ್ಚು, ಉಪ್ಪು ಮೆಣಸು ತಗೊಂಡು ಸಂತೆ ಮುಗಿಸುತ್ತಾರೆ.

ಬಾಂಬೆ ಎಂಬ ಮಾಯಾನಗರಿ. ದೇಶದ ವಾಣಿಜ್ಯ ರಾಜಧಾನಿ. ಅಲ್ಲಿ ಕಸಬಾಚಿ ಲಾರಿಗೆ ತುಂಬಿ ಉರಾಚೆಕೊಂಡೊಯ್ದು ಸುರಿಯುವ ಪೌರಕಾರ್ಮಿಕರು ಕಸದಂತೆಯೇ ಬದುಕುತ್ತಾರೆ. 18 ಗಂಟೆ ದುಡಿದು 1800/- ರೂ ಕೂಲಿ ಪಡೆದರೆ ಮಾಲೀಕರು ದಿನಕ್ಕೆ 18000 ರೂ ಲಾಭ ಸಂಪಾದಿಸುತ್ತಾರೆ. ಕಸ ಎಸೆಯುವ ಸ್ಥಳದಲ್ಲಿ ಕುಡಿವ ನೀರಿನ ವ್ಯವಸ್ಥೆಗೆ ವರ್ಷಗಟ್ಟಲೆ ಹೋರಾಡಬೇಕು.

ಸಿಂಗಪುರವಾಗಲು ಸಜ್ಜಾಗುತ್ತಿರುವ ಬೆಂಗಳೂರಿನಲ್ಲಿ 7000 ಜನ ಗುತ್ತಿಗೆ ಪೌರಕಾರ್ಮಿಕರು ಕನಿಷ್ಟ ಕೂಲಿ ರೂ 1800/- ಕ್ಕೆ ಹಲವಾರು ವರ್ಷಗಳಿಂದ ಹೋರಾಡುತ್ತಿದ್ದರೆ ಗುತ್ತಿಗೆದಾರರು ಪ್ರತಿ ತಿಂಗಳು ಬಾಚಿಕೊಳ್ಳುವ ಲಾಭ ಒಂದು ಕೋಟಿ.

ಕೃಷಿ ಕೂಲಿಗಾರರಾಗಲಿ, ಪೌರಕಾರ್ಮಿಕರಾಗಲಿ ಅವರಲ್ಲಿ ಹೆಚ್ಚಿನವರು ದಲಿತ ಮಹಿಳೆಯರೆಂದು ವಿಶೇಷವಾಗಿ ಹೇಳುವ ಅಗತ್ಯವಿಲ್ಲ. ಇಲ್ಲೆಲ್ಲಾ ದಲಿತರಿಗೆ ಶೇ 80-90 ರಷ್ಟು ಮಿಸಲಾತಿ ! ಯಾರೂ ಪ್ರಶ್ನಿಸುವುದಿಲ್ಲ. ಪ್ರಶ್ನೆ ಬರುವುದು ಇಂಜನಿಯರಿಂಗ್, ವೈದಕೀಯ ಕ್ಷೇತ್ರಕ್ಕೆ ಆಫೀಸರ್‌ಗಿರಿಗೆ ಬಂದಾಗ ಮಾತ್ರ. ಈಗ ಗುತ್ತಿಗೆ ಪೌರಕಾರ್ಮಿಕರಿಗೂ ಕುತ್ತು ಬಂದಿದೆ. ಸ್ವಚ್ಛತೆಯ ಕೆಲಸದಲ್ಲಿರುವ ಹೆಚ್ಚಿನವರು ದಲಿತರು. ಸ್ವಚ್ಛತೆಯ ಕೆಲಸ ನಿರಂತರವಾಗಿ ನಡೆಯ ಬೇಕಾದ ಅಗತ್ಯ ಕೆಲಸ. ಆದರೆ ಈ ದಲಿತರು SC/ST ದೌರ್ಜನ್ಯ ಕಾಯ್ದೆ, ಗುತ್ತಿಗೆ ಕಾರ್ಮಿಕ ಕಾಯ್ದೆ ಹಿಡಿದುಕೊಂಡು ದೊಂಬಿ ಮಾಡುತ್ತಾರೆ, ಕೆಲಸ ಸರಿಯಾಗಿ ಮಾಡುವುದಿಲ್ಲ ಆದ್ದರಿಂದ ಈ ಎರಡೂ ಕಾಯ್ದೆಯನ್ನು ಅವರಿಗೆ ಅನ್ವಯಿಸದಂತೆ ಮಾಡಬೇಕೆಂದು ನಮ್ಮ ರಾಜ್ಯದಿಂದ ಅಲ್ ಮಿತ್ರಾ ಪಟೇಲ್ ಎಂಬ ಪರಿಸರವಾದಿ ಸುಪ್ರೀಂ ಕೋರ್ಟಿಗೆ ಹೋಗಿದ್ದಾರೆ!

ದಲಿತ ವಿರೋಧಿ, ಮಹಿಳಾ ವಿರೋಧಿ NDA ಸರ್ಕಾರವಿರುವಾಗ ಗುತ್ತಿಗೆ ಪೌರಕಾರ್ಮಿಕರ ವಿರುದ್ಧ ತೀರ್ಪು ಬಂದರೆ ಆಶ್ಚರ್ಯವೇನಿಲ್ಲ. ಸಮಾಜಿಕ ನ್ಯಾಯ ಸಮಾನತೆಯಲ್ಲಿ ನಂಬಿಕೆ ಇರಿಸಿರುವ ಮಹಿಳಾ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು, ದಲಿತ ಸಂಘಟನೆಗಳು, ಮಾನವ ಹಕ್ಕುಗಳಿಗಾಗಿ ಹೋರಾಡುವ ಸಂಘಟನೆಗಳು.

ಒಟ್ಟಾಗಿ ಅತ್ಯಂತ ಶೋಷಿತರಾದ ಪೌರಕಾರ್ಮಿಕರ ಹೋರಾಟವನ್ನು ಬೆಂಬಲಿಸಲು ಬದ್ಧರಾಗಬೇಕಿದೆ.

**- ಸಂಪಾದಕ ಮಂಡಳಿ**

# ಮಹಿಳೆಯರು ರಾಮಾಯಣವನ್ನು ಮತ್ತೆ ಹೇಳಿದಾಗ

ಇಡೀ ಜಗತ್ತಿನ ಮಹಾಕಾವ್ಯಗಳನ್ನು ಬರೆದವರು ಪುರುಷರು. ಅವರು ಪುರುಷರನ್ನು ಅದರಲ್ಲೂ ಶಸ್ತ್ರಸಜ್ಜಿತ ಅಥವಾ ಶಕ್ತಿಶಾಲಿ ಪುರುಷರನ್ನು ಹಾಡಿ ಹೊಗಳಿದ್ದಾರೆ. ಅವುಗಳ ಆದರ್ಶಗಳು ಮಹಿಳೆಯರಿಗೆ ಸಂಬಂಧಿಸಿರುವುದಿಲ್ಲ. ಮಹಿಳೆಯರು ಕೂಡ ವೀರತ್ವದ ಮೌಲ್ಯಗಳನ್ನು ಮೆಚ್ಚುವುದಿಲ್ಲ. ಅವುಗಳಲ್ಲಿ ಅವರು ಅಪಹೃತರಾಗುತ್ತಾರೆ ಅಥವಾ ರಕ್ಷಿತರಾಗುತ್ತಾರೆ ಅಥವಾ ಜೂಜಾಟದ ಪಣಕ್ಕೊಡ್ಡುವ ವಸ್ತುವಾಗುತ್ತಾರೆ ಅಥವಾ ಲೈಂಗಿಕ ಕಿರುಕುಳಕ್ಕೊಳಗಾಗುತ್ತಾರೆ. ಅಥವಾ ಒಂದಲ್ಲ ಒಂದು ರೀತಿಯಲ್ಲಿ ಅವಮಾನಿತರಾಗುತ್ತಾರೆ. ಆದ್ದರಿಂದ ಮಹಿಳೆಯರು ಮತ್ತೊಮ್ಮೆ ಆ ಕಾವ್ಯಗಳನ್ನು ಹೇಳಿದರೆ ? ಅದಕ್ಕೆ ಹಲವು ದಾರಿಗಳಿವೆ.

1) ಪುರುಷ ಮಹಾಕವಿಯ ದೃಷ್ಟಿಕೋನವನ್ನೇ ಅಳವಡಿಸಿಕೊಂಡು ಅದು ಇದ್ದಂತೆಯೇ ಹೇಳಬಹುದು. 16ನೇ ಶತಮಾನದ ತೆಲುಗು ರಾಮಾಯಣದಲ್ಲಿ ಮೊಲ್ಲ ಅದನ್ನೇ ಮಾಡುತ್ತಾಳೆ.

2) ಅಥವಾ ಮಹಿಳಾ ದೃಷ್ಟಿಕೋನದಿಂದ ಹೇಳಬಹುದು. 16ನೇ ಶತಮಾನದ ಬಂಗಾಳಿ ರಾಮಾಯಣದಲ್ಲಿ ಚಂದ್ರಬತಿ ಅದನ್ನೇ ಮಾಡುತ್ತಾಳೆ. ಅಥವಾ

3) ಯಾವುದಾದರೊಂದು ಸೈದ್ಧಾಂತಿಕ ದೃಷ್ಟಿಕೋನದಿಂದ ಹೇಳಬಹುದು. ರಂಗನಾಯಕಮ್ಮ ತಮ್ಮ "ರಾಮಾಯಣ ವಿಷಬ್ರಿಕ್ಷಂ" ನಲ್ಲಿ ಮಾರ್ಕ್ಸ್‌ವಾದೀ ದೃಷ್ಟಿಕೋನದಿಂದ ರಾಮನ ಕಥೆಯನ್ನು ಮರು ಸೃಷ್ಟಿಸುತ್ತಾರೆ. ಅಥವಾ

4) ಸೀತೆಯ ಕಥೆಯ ಮೂಲಕ ನಿಮ್ಮದೇ ಕಥೆಯನ್ನು ಹೇಳಬಹುದು. ಇದನ್ನು ಭಾರತದ ಗ್ರಾಮೀಣ ಮಹಿಳೆಯರು ನೂರಾರು ವರ್ಷಗಳಿಂದ ಮಾಡುತ್ತಾ ಬಂದಿದ್ದಾರೆ.

ತಮ್ಮ ಪ್ರಾಂತೀಯ ಭಾಷೆಗಳಲ್ಲಿ ರಾಮಾಯಣವನ್ನು ಮರುಕಥಿಸುವ ಪ್ರಯತ್ನವನ್ನು ಮೊಟ್ಟ ಮೊದಲಿಗೆ ಮಾಡಿದವರೆಂದರೆ, ಚಂದ್ರಬತಿ ಮತ್ತು ಮೊಲ್ಲರವರೆನ್ನಬಹುದು. ಇವರಿಬ್ಬರಲ್ಲೂ ಹಲವು ಸಾಮ್ಯಗಳಿವೆ. ಇಬ್ಬರೂ ವೃತ್ತಿಪರ ಕವಯಿತ್ರಿಯರಾಗಲು ಅವಿವಾಹಿತರಾಗುಳಿದರು. ಶಿವನ ಆರಾಧಕರಾಗಿಯೂ ರಾಮಾಯಣವನ್ನು ಬರೆದರು. ಶೂದ್ರ ಮಹಿಳೆಯಾದ ಮೊಲ್ಲ ಒಂದು ಪರಿಪೂರ್ಣವಾದ, ಮಹತ್ವದ ರಾಮಾಯಣವನ್ನು ಬರೆಯುವ ಮೂಲಕ ಆಸ್ಥಾನದ ಬ್ರಾಹ್ಮಣ ಕವಿಗಳಿಗೆ ಸವಾಲನ್ನೆಸೆದಳು. ಚಂದ್ರಬತಿಯ ರಾಮಾಯಣವು ಸೀತೆಯ ಕಥೆಯನ್ನು ಮಾತ್ರ ಹೇಳುತ್ತಾ ರಾಮನನ್ನು ಮಹಿಳಾ ದೃಷ್ಟಿಕೋನದಿಂದ ವಿಮರ್ಶಿಸಿತು. ಮೊಲ್ಲಳ ಕೃತಿಯನ್ನು ರಾಜನ ಆಸ್ಥಾನದಲ್ಲಿ ಓದದಂತೆ ಬ್ರಾಹ್ಮಣರು ತಡೆಯೊಡ್ಡಿದರು. ಚಂದ್ರಬತಿಯ ಕೃತಿಯನ್ನು ದುರ್ಬಲ ಮತ್ತು ಅಪೂರ್ಣ ಕೃತಿಯೆಂದು ವಿಮರ್ಶಕರು ತಿರಸ್ಕರಿಸಿದರು. ರಂಗನಾಯಕಮ್ಮ 'ಪವಿತ್ರ ಗ್ರಂಥದ' ವಿರುದ್ಧ ಧಾಳಿಮಾಡಿ ಸಾಕಷ್ಟು ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದರು.

ಗ್ರಾಮೀಣ ಮಹಿಳೆಯರು ಆಸ್ಥಾನಕ್ಕಾಗಲೀ, ವಿಮರ್ಶಕರಿಗಾಗಲೀ ಸೊಪ್ಪು ಹಾಕುವವರಲ್ಲ ; ಅವರು ಜಗತ್ತನ್ನು ಬದಲಿಸುತ್ತೇವೆನ್ನುವವರೂ ಅಲ್ಲ. ಅವರು ಹಾಡುತ್ತಾ ಇರುತ್ತಾರೆ, ತಮಗಾಗಿ.

ಒಬ್ಬ ಆದರ್ಶ ಹಿಂದೂ ಪುರುಷನನ್ನು ರೂಪಿಸ ಹೊರಟ ಈ ಪುರುಷ ಪ್ರಧಾನವಾದ ವೈದಿಕ ವ್ಯವಸ್ಥೆಯು ರಾಮನ ಕಲ್ಪನೆಯನ್ನು ಬಳಸಿಕೊಂಡಿತು. ಹಾಗೇ ಸೀತೆಯನ್ನೂ ಕೂಡ ಆದರ್ಶ ಹಿಂದೂ ಹೆಣ್ಣನ್ನಾಗಿ ರೂಪಿಸಲಾಯಿತು. ಇದು ವಿಶೇಷ ಪರಿಣಾಮವನ್ನು ಬೀರಿದೆ. ಸ್ಯಾಲಿ ಸುಂದರಲ್ಯಾಂಡ್ ಎನ್ನುವವರು ಹಲವು ವರ್ಷಗಳ ಹಿಂದೆ ಸಂದರ್ಶಿಸಿದ ಭಾರತೀಯರಲ್ಲಿ ಶೇಕಡ 90 ಮಂದಿಗೆ ಸೀತೆ ಬಹಳ ಇಷ್ಟವಾದ ಮಹಿಳೆಯಾಗಿದ್ದಳು. ಮದು ಮಗಳನ್ನು ಹರಸುವಾಗ 'ದ್ರೌಪದಿಯಂತೆ ಇರು' ಎಂದು ಯಾರೂ ಹರಸುವುದಿಲ್ಲ. ಅದು ಸೀತೆ - ಸಾವಿತ್ರಿಯರೇ ಆಗಿರುತ್ತಾರೆ. ಏಕೆಂದರೆ, ಅವರು ರಕ್ಷಕರಾಗಿದ್ದಾರೆ. ಸಾವಿತ್ರಿ ತನ್ನ ಗಂಡನ ಪ್ರಾಣವನ್ನು ಕಾಪಾಡಿದರೆ, ಸೀತೆ ತನ್ನ ಗಂಡನ ಮಾನವನ್ನು ಕಾಪಾಡುತ್ತಾಳೆ. ಸೀತೆಯ ಬದುಕು ಸುಖಕರವಾಗಿಲ್ಲ

-ದಿದ್ದರೂ ಅವಳು ಆದರ್ಶ ಮಹಿಳೆಯಾಗಿ ಉಳಿದು-ಕೊಂಡಿದ್ದಾಳೆ. ಅವಳಿಂದಾಗಿ ಪುರುಷಪ್ರಧಾನ ಮೌಲ್ಯಗಳು ವ್ಯಾಪಕವಾಗಿ ಹರಡಬಹುದು; ಮಹಿಳೆಯರಿಗೆ ತಮಗಾಗುವ ಅನ್ಯಾಯಗಳೆಲ್ಲವನ್ನೂ ಮೌನವಾಗಿ ಸಹಿಸಬೇಕೆನ್ನುವುದನ್ನು ಬೋಧಿಸಬಹುದು.

ಯಾವುದೇ ಕಲ್ಪನೆಯನ್ನು ಬಳಸಿಕೊಳ್ಳುವ ಪರ್ಯಾಯ ಮಾರ್ಗಗಳು ಯಾವಾಗಲೂ ಇರುತ್ತವೆ. ಪುರುಷ ಪ್ರಧಾನತೆಯು ಮಹಿಳೆಯರನ್ನು ಮೌನಿಗಳಾಗಿಸಲು ಸೀತೆಯ ಕಲ್ಪನೆಯನ್ನು ಬಳಸಿಕೊಂಡರೆ ಅದನ್ನು ಗ್ರಾಮೀಣ ಮಹಿಳೆಯರು ತಮ್ಮ ಬದುಕಿಗೆ ದನಿಯನ್ನಾಗಿಸಿದ್ದಾರೆ; ತಮ್ಮನ್ನು ತಾವು ಅಭಿವ್ಯಕ್ತಿಸುವ ಮಾಧ್ಯಮವಾಗಿ ಕಂಡಿದ್ದಾರೆ ; ತಮ್ಮ ದೈನಂದಿನ ಸಮಸ್ಯೆಗಳನ್ನು ಹೇಳಿಕೊಳ್ಳಲು, ಪುರುಷ ಪ್ರಧಾನತೆಯನ್ನು ಮುಖವಾಡವೆಂದು ಭಾವಿಸಿದ್ದಾರೆ.

ಮಹಿಳೆಯರ ಮರುಕಥನದಲ್ಲಿ ವೈದಿಕ ರಾಮನ ಕಲ್ಪನೆ ಸಹಜವಾಗಿ, ಉದ್ದೇಶರಹಿತವಾಗಿ ಚೂರುಚೂರಾಗಿದೆ. ಇಲ್ಲಿಯ ರಾಮ ಒರಟು ಸ್ವಭಾವದ, ಕಾಳಜಿರಹಿತ ಮತ್ತು ದುರ್ಬಲ ಮನಸ್ಸಿನ ಗಂಡನಾಗಿ ಚಿತ್ರಿತನಾಗಿದ್ದು ಆದರ್ಶ ಪುರುಷನಿಂದ ಬಹುದೂರನಾಗಿದ್ದಾನೆ. ಅವನನ್ನು 'ಪಾಷಂಡ' ಅಥವಾ 'ಪಾಪಿಷ್ಠಿ' ಎಂದು ಕರೆಯುತ್ತಾರೆ; 'ರಾಮ' ನೀನು ನಿನ್ನ ಬುದ್ಧಿಸ್ಥಿಮಿತವನ್ನು ಕಳೆದುಕೊಂಡಿದ್ದೀಯೆ ಎಂದು ನೇರವಾಗಿ ಜರಿಯುತ್ತಾರೆ. ಆ ಹಾಡುಗಳು ನಿಯಮಗಳಿಗೆ ಹೊರತಾದವಾದುದರಿಂದ ಇದು ಸಾಧ್ಯವಾಗಿದೆ. ಮಹಿಳೆಯರ ಸೀತೆಯ ಕಲ್ಪನೆ ಮೇಲ್ಪದರದಲ್ಲಿ ಮಾತ್ರ ಕಂಡರೆ, ಪುರುಷರ ಸೀತೆಯ ಕಲ್ಪನೆ 'ದೇವಿ' ಯಾಗಿ ಮುಖ್ಯವಾಹಿನಿಯಲ್ಲಿ ಮುಂದುವರಿಯುತ್ತದೆ. ಮಹಿಳೆಯರ ಮರುಕಥನದಲ್ಲಿ ಸೀತೆಯು ಕ್ರಾಂತಿಕಾರಿಯಲ್ಲ ; ಅವಳಿನ್ನೂ ಎಲ್ಲವನ್ನು ಒಪ್ಪಿಕೊಳ್ಳುವ ಕಷ್ಟಸಹಿಷ್ಣುವಾದ ಹೆಂಡತಿ; ಆದರೆ ತನಗಿರುವ ಕಷ್ಟ, ಆದ ಅನ್ಯಾಯ, ಏಕಾಂತ ಮತ್ತು ದುಃಖಗಳನ್ನು ಕುರಿತು ಮಾತನಾಡುತ್ತಾಳೆ.

ದುಡಿಮೆಯ ಹಾಡುಗಳು ಮತ್ತು ಸಾಂಪ್ರದಾಯಿಕ ಹಾಡುಗಳು ಮಹಿಳಾ ರಾಮಾಯಣಗಳ ಶ್ರೀಮಂತ ಪ್ರಪಂಚವನ್ನು ತೆರೆದಿಡುತ್ತವೆ. ಹೊಲದಲ್ಲಿ ಕಳೆ ಕೀಳುವಾಗ, ಬೀಜಬಿತ್ತುವಾಗ, ಮನೆಯಂಗಳದಲ್ಲಿ ಕುಟ್ಟುವಾಗ, ಕೇರುವಾಗ ಅಥವಾ ಧಾರ್ಮಿಕ ಸಮಾರಂಭಗಳಿಗೆ ಸಿದ್ಧತೆ ನಡೆಸುವಾಗ ಮಹಿಳೆಯರು ಈ ಹಾಡುಗಳನ್ನು ಹಾಡುತ್ತಾರೆ. ಇವು ಹೆಣ್ಣೊಬ್ಬಳ ಬದುಕಿನ ಬೇರೆ ಬೇರೆ ಕ್ಷಣಗಳಿಗೆ ಸಂಬಂಧಿಸಿವೆ. ಸೀತೆ ಎನ್ನುವುದು ಹೆಣ್ಣೊಬ್ಬಳ ಹೆಸರು ಮಾತ್ರ. ಅವಳು ಮೈನೆರೆಯುತ್ತಾಳೆ, ಮದುವೆಯಾಗುತ್ತಾಳೆ; ಗರ್ಭಿಣಿಯಾಗುತ್ತಾಳೆ, ತ್ಯಜಿಸಲ್ಪಡುತ್ತಾಳೆ, ಮಕ್ಕಳನ್ನು ಹೆರುತ್ತಾಳೆ. ಮಹಿಳೆಯರು ಅದನ್ನು ರಾಮಾಯಣವೆಂದು ಕರೆದರೂ ಸೀತೆಯ ಹಾಡನ್ನು ಹಾಡುತ್ತಾರೆ.

ರಾಮಾಯಣದ ಮರುಕಥನಗಳಲ್ಲಿ ಮಹಿಳೆಯರು ತಮಗೆ ಬೇಕಾದ ಘಟನೆ / ಕಥೆಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ತಮ್ಮ ಬದುಕಿಗೆ ಸಂಬಂಧಿಸಿರದ ವೀರರನ್ನು ಕುರಿತ ಮಹಾಕಾವ್ಯದ ವರ್ತುಲದಲ್ಲಿ ಅವರಿಗೆ ಆಸಕ್ತಿಯಿರುವುದಿಲ್ಲ. ಒಂದುವೇಳೆ ಅವರು ರಚಿಸಿದ ಕಥೆ ತುಂಡುತುಂಡಾಗಿದ್ದರೆ ಅದಕ್ಕೆ ಅವರ ಬದುಕು ಹಾಗಿರುವುದೇ ಕಾರಣ. ಅದೇ ಅವರಿಗೆ ಇಡೀ ಕಥೆಯಾಗಿರುತ್ತದೆ. ಅದು ಮಹಿಳೆಯರ ಪ್ರಪಂಚವನ್ನು ಸಂಪೂರ್ಣವಾಗಿ ಬಿಂಬಿಸುತ್ತದೆ.

ಹಾಡುಗಾರ್ತಿಯರಿಗೆ ರಾಮಾಯಣದ ಬಾಲಕಾಂಡ ಮತ್ತು ಉತ್ತರಕಾಂಡಗಳಿಂದ ಆಯ್ದ ಪ್ರಸಂಗಗಳು ಪ್ರಿಯವಾದವು. ಸತ್ಯಕ್ಕೆ ದೂರವಾದ ಎಂದು ಭಾವಿಸಲಾಗುವ ಈ ಎರಡು ಅಧ್ಯಾಯಗಳನ್ನು ರಾಮಾಯಣದ ಪಂಡಿತರು ಕಟ್ಟುನಿಟ್ಟಾಗಿ ಬಹಿಷ್ಕರಿಸುತ್ತಾರೆ. ಬಾಲಕಾಂಡವು ಸೀತೆಯ ಜನನ, ವಿವಾಹ ಮತ್ತು ರಾಮನ ಪಟ್ಟಾಭಿಷೇಕದ ಯೋಜನೆಗಳಿಗೆ ಮೊದಲು ಏನಾಗಿತ್ತೆನ್ನುವುದನ್ನು ಹೇಳುತ್ತದೆ. ಯುದ್ಧ ಮುಗಿದು ರಾಮ-ಸೀತೆಯರು ಅಯೋಧ್ಯೆಗೆ ಮರಳಿದ ನಂತರ ಏನಾಯಿತೆನ್ನುವುದನ್ನು ಉತ್ತರ ಕಾಂಡ ಹೇಳುತ್ತದೆ. ಈ ಹಾಡುಗಳು ರಾಮನನ್ನು ಹೊಗಳುವುದಿಲ್ಲ. ಮಹಿಳೆಯರು ಯುದ್ಧದ ವಿವರ, ರಾಮನ ವೈಭವ ಮತ್ತು ವೈದಿಕ ಆಚರಣೆಗಳ ವಿವರಗಳಲ್ಲಿ ಆಸಕ್ತಿ ತೋರುವುದಿಲ್ಲ. ಅವರು ಸೀತಾ ಪರಿತ್ಯಾಗ, ಅನ್ಯಾಯ, ಪ್ರಣಯ, ವಿವಾಹ, ಗರ್ಭಧಾರಣೆ ಮತ್ತು ಶಿಶುಜನನದಂಥವುಗಳಿಗೆ ಸಂಬಂಧಿಸಿದ ಹಾಡುಗಳನ್ನೇ ಹೆಚ್ಚಾಗಿ ಹಾಡುತ್ತಾರೆ. ಹಾಡುಗಳು ಸೀತೆಯನ್ನು ಕೇಂದ್ರೀಕರಿಸಿರುತ್ತವೆ. ರಾಮನು ಸಾಮಾನ್ಯವಾಗಿ ವಿಜೃಂಭಿಸುವ ನೈತಿಕ ಶಕ್ತಿ (ತಂದೆಯನ್ನು ಪೂಜಿಸುವುದು) ಮತ್ತು ದೈಹಿಕ ಶಕ್ತಿ (ರಾಕ್ಷಸರನ್ನು ಕೊಲ್ಲುವುದು) ಗಳನ್ನು ಪ್ರದರ್ಶಿಸುವ ಘಟನೆಗಳಲ್ಲಿ ಮಹಿಳೆಯರಿಗೆ ಆಸಕ್ತಿ ಇದ್ದಂತಿಲ್ಲ. ಆದರೆ ರಾಮನ ಅಗ್ನಿ ಪರೀಕ್ಷೆ ಪತ್ನಿ ಪರಿತ್ಯಾಗಗಳು ಮಾತ್ರ ಅವರ ಗಮನವನ್ನು ಸೆಳೆಯುತ್ತವೆ. ಈ ಹಾಡುಗಳಲ್ಲಿ ಸಾಂದರ್ಭಿಕವಾಗಿ ಪದೇ ಪದೇ ಕಾಣಿಸುವ

ವ್ಯಕ್ತಿಯೆಂದರೆ, ಸೀತೆಯ ಮೈದುನ ಮತ್ತು ಅರಣ್ಯಸಂಗಾತಿಯಾದ ಲಕ್ಷ್ಮಣ. ಸೀತೆಗೆ ಸಂವಾದಿಸಲು ಸಾಧ್ಯವಾದ ಒಬ್ಬನೇ ಒಬ್ಬ ಪುರುಷನಾದ ಲಕ್ಷ್ಮಣನನ್ನು ಭಾರತ ಮತ್ತು ಬಾಂಗ್ಲಾ ದೇಶಗಳ ಗ್ರಾಮೀಣ ಮಹಿಳೆಯರು ಪರಿಗಣಿಸುತ್ತಾರೆ. ಈ ಮಹಿಳೆಯರು ಒಂದೇ ಚಾರಿತ್ರಿಕ ಅನುಭವ, ಸಾಮಾಜಿಕ - ಆರ್ಥಿಕ ಪರಿಸ್ಥಿತಿಗಳನ್ನು ಹಂಚಿಕೊಂಡಿದ್ದಾರೆ. ಒಂದು ಗಣ್ಯವರ್ಗಕ್ಕೆ ಹತ್ತಿರವಾದ ಪುರುಷಪ್ರಧಾನಗ್ರಂಥಕ್ಕೆ ಅವರ ಪ್ರತಿಕ್ರಿಯೆ ಜನಸಾಮಾನ್ಯರಿಗೆ ಅನ್ವಯಿಸುವ ಅಂಶಗಳನ್ನು ತೋರಿಸುತ್ತದೆ. ಅವರ ಮೌಲ್ಯಗಳು ಇನ್ನೊಬ್ಬರದಕ್ಕಿಂತ ಹೆಚ್ಚು ಬೇರೆಯಾಗಿಲ್ಲ. ಆದರೆ ಮಹಾಕಾವ್ಯದ ಕಾಳಜಿಗಳೇ ಆಗಿರುವ ಆಳುವ ಪುರುಷರ ಮೌಲ್ಯಕ್ಕಿಂತ ಬಹಳಷ್ಟು ಬೇರೆಯಾಗಿವೆ. ಮುಖ್ಯವಾಹಿನಿಯ ಹಾಡುಗಾರರು ಹಾಡುವ <u>ರಾಮಾಯಣವು</u> ಮಹಿಳೆಯರ ಹಾಡುಗಳೊಂದಿಗೆ ಸಾಮಾನ್ಯವಾದುದೇನನ್ನೂ ಹೊಂದಿರುವುದಿಲ್ಲ. ಪುರುಷ ಹಾಡುಗಾರರು ಸಾರ್ವಜನಿಕರಿಗಾಗಿ ಹಾಡುತ್ತಾರೆ; ಮಹಿಳೆಯರು ತಮಗಾಗಿ ಹಾಡಿಕೊಳ್ಳುತ್ತಾರೆ. ಮಹಾಕಾವ್ಯ ಮತ್ತು ಹಾಡುವ ಕ್ರಿಯೆಯನ್ನು ಅವರು ನೋಡುವ ರೀತಿಗಳು ಸಂಪೂರ್ಣವಾಗಿ ಬೇರೆಯಾಗಿರುತ್ತವೆ. ಹಾಡುಗಾರನು ರಾಮನನ್ನು ಕುರಿತು ಹಾಡಿದರೆ, ಗ್ರಾಮೀಣ ಮಹಿಳೆ ಸೀತೆಯನ್ನು ಕುರಿತು ಹಾಡುತ್ತಾಳೆ.

ಈ ಹಾಡುಗಳಲ್ಲಿ ಸಾಮಾನ್ಯವಾಗಿರುವ ಹತ್ತು ಉಪವಿಷಯಗಳನ್ನು ಗುರುತಿಸಬಹುದು. ಅವು ಇಂದಿನ ಭಾರತೀಯ ಮಹಿಳೆಯರ, ಅದರಲ್ಲೂ ಗ್ರಾಮೀಣ ಮಹಿಳೆಯರ ಬದುಕಿಗೆ ಹೆಚ್ಚು ಪ್ರಸ್ತುತವಾಗುತ್ತವೆ.

1) ತಬ್ಬಲಿಯಾದ ಸೀತೆ-ಮೂಲದಲ್ಲಿ ಅನಾಥ ಹೆಣ್ಣು ಮಗು.

2) ಮಗಳ ವಿವಾಹದ ಬಗ್ಗೆ ಚಿಂತಿತರಾಗುವ ತಂದೆ ತಾಯಂದಿರು.

3) ಹೆಣ್ಣೊಪ್ಪಿಸುವ ಹಾಡುಗಳು

4) ಬಾಲ್ಯವಿವಾಹ ಮತ್ತದರ ಸಮಸ್ಯೆಗಳು

5) ಗಂಡನ ಮನೆಯವರು ಮತ್ತು ವಧು; ಕೌಟುಂಬಿಕ ಕಿರುಕುಳದ ಸ್ವರೂಪ

6) ಚಿನ್ನದ ಜಿಂಕೆ; ಬಲಿಯಾದವರನ್ನೇ ಅಪರಾಧಿ-ಯನ್ನಾಗಿಸುವುದು; 'ಅವಳೇ ತಂದುಕೊಂಡದ್ದು' ಎನ್ನುವ ಮನೋಭಾವ

7) ಪುರುಷಪ್ರಧಾನ ಸಮಾಜದಲ್ಲಿ ತನ್ನ ಸ್ಥಾನದ ಭದ್ರತೆಗಾಗಿ ಮಗನೊಬ್ಬನನ್ನು ಹೆರಬೇಕಾದ ಅನಿವಾರ್ಯತೆ ಮತ್ತು ಪುರುಷ ಬದುಕಿನ ಮೌಲ್ಯ.

8) ಗರ್ಭಾವಸ್ಥೆ-ಬಯಕೆಗಳು

9) ದಾರುಣ ಪರಿಸ್ಥಿತಿಯಲ್ಲಿ ಪ್ರಸವ

10) ಪರಿತ್ಯಾಗ-ತಿರಸ್ಕಾರವನ್ನು ಎದುರಿಸುವುದು ಮತ್ತು ತನ್ನ ಸಾಮಾಜಿಕ ಅಸ್ತಿತ್ವವನ್ನು ಕಳೆದುಕೊಳ್ಳುವುದು.

ಗ್ರಾಮೀಣ ಮಹಿಳೆಯರ ಜೀವನದಲ್ಲಿ ಸೀತೆಯ ಕಲ್ಪನೆ ಹೆಚ್ಚಿನದೇನನ್ನೋ ಮಾಡುತ್ತದೆನ್ನುವುದಕ್ಕಿಂತ ಅವರಿಗೆ ಇಷ್ಟವಾದ ವ್ಯಕ್ತಿಯೊಂದನ್ನು ಹಾಗೂ ದನಿಯೊಂದನ್ನು ನೀಡುತ್ತದೆ.

ಮೇಲೆ ಹೇಳಿದ ವಸ್ತು ವಿಷಯಗಳಿಗೆ ಯಾವುದೇ ಧಾರ್ಮಿಕ ಮಹತ್ವವಿರುವಂತೆ ಕಾಣುವುದಿಲ್ಲ. ಅವು ಪುರುಷರಿಗೆ ಸಂಬಂಧಿಸಿಯೂ ಇಲ್ಲ. ಬದಲಿಗೆ ಅವು ಮಹಿಳೆಯರ ಬದುಕಿನ ಅತ್ಯಂತ ಕಠಿಣ ಅಥವಾ ಅಪಾಯಕರವಾದ ಕ್ಷೇತ್ರಗಳಿಗೆ - ಅಭದ್ರತೆಯ ಅಥವಾ ದೈಹಿಕ ಅಪಾಯದ ಗಾಢವಾದ ಕ್ಷಣಗಳಿಗೆ ಸಂಬಂಧಿಸಿವೆ. ಅವು ಕಠಿಣಶ್ರಮ ಅಥವಾ ಬಡತನದ ವಿರುದ್ಧ ದೂರುವುದಿಲ್ಲ. ಆದರೆ ತಮ್ಮ ಹಕ್ಕುಗಳನ್ನು ಕಡೆಗಣಿಸುವ ಅಥವಾ ನಿರಾಕರಿಸುವುದರ ವಿರುದ್ಧ ದೂರುತ್ತವೆ. ಮಹಿಳೆಗೆ ತನ್ನದೇ ಆದ ಸಾಮಾಜಿಕ ಅಸ್ತಿತ್ವ ಇಲ್ಲ ; ಅವಳ ಗಂಡ ಅವಳಿಗೆ ಅಸ್ತಿತ್ವವನ್ನು ಕೊಡುತ್ತಾನೆ; ಅದರಿಂದ ಅವಳನ್ನು ಪರಿಭಾಷಿಸುತ್ತಾನೆ. ಸೀತೆಯ ಹಾಡುಗಳ ಮೂಲಕ ಬಹುಸಂಖ್ಯಾತ ಮೂಕ ಜನರ ದನಿಯನ್ನು ನಾವು ಕೇಳಬಹುದು. ಆದರೆ ಮಹಾಕಾವ್ಯಗಳು ಶಕ್ತಿಶಾಲಿಗಳಾದ ಕೆಲವೇ ಮಂದಿಯ ವೈಭವವನ್ನು ಹಾಡುತ್ತವೆ.

ಸೀತೆಯ ಪ್ರಸವವೇದನೆಯನ್ನು ಹೇಳುವಾಗ ಮರಾಠಿ, ತೆಲುಗು, ಬಂಗಾಳಿ ಮತ್ತು ಮೈಥಿಲಿ ಭಾಷೆಗಳು ತಮ್ಮದೇ ಆದ ವೈಶಿಷ್ಟವನ್ನು ಹೊಂದಿವೆ. ಉದಾಹರಣೆಗೆ, ಮರಾಠಿ ಮಾತ್ರ ಗಂಡನ ಸಂಬಂಧಿಕರು ಮತ್ತವರ ಕೈಗೊಂಬೆಯಂತಿರುವ ಗಂಡನಿಂದ ಕಷ್ಟಗಳನ್ನನುಭವಿಸು-ವುದರ ವಿವರಗಳನ್ನು ಹೊಂದಿದೆ. ಜನಕನು ತನ್ನ ಮಗಳಾದ ಸೀತೆಗೆ ವರನನ್ನು ಹುಡುಕುತ್ತಾ ನಿರಾಶನಾಗುವುದನ್ನು ಮೈಥಿಲ ಭಾಷೆಯ ಹಾಡುಗಳು ಮತ್ತೆ ಮತ್ತೆ ಚಿತ್ರಿಸುತ್ತವೆ.

ಸೀತೆಯನ್ನು ಕಾಡಿಗೆ ಕಳುಹಿಸಿದಾಗ ಕುಟುಂಬದ್ದ ಮಹಿಳೆಯರೆಲ್ಲ ರ ಬೆಂಬಲ ಅವಳಿಗೆ ದೊರೆತುದನ್ನು ತೆಲುಗು ಹಾಡುಗಳಲ್ಲಿ ಮಾತ್ರ ಕಾಣಬಹುದು. ಬಂಗಾಳಿ ಹಾಡುಗಳು ಬಹುಶಃ ರಾಮನ ಬಗ್ಗೆ ಅತ್ಯಂತ ಕಠಿಣ ಶಬ್ದಗಳನ್ನು ಬಳಸುತ್ತವೆ. ವಾಸ್ತವದಲ್ಲಿ ಬೇರೆ ಭಾಷೆಗಳಲ್ಲಿ ಕೂಡ ಪ್ರತಿಯೊಬ್ಬ ಮಹಿಳೆಯೂ ರಾಮನನ್ನು ಟೀಕಿಸುತ್ತಾರೆ. ಬಂಗಾಳಿಯಲ್ಲಿ ರಾಮನನ್ನು ಹೊಟ್ಟೆಕಿಚ್ಚಿನ ಮತ್ತು ಸಂಶಯದ ಕೀಟ ಎಂದಿರುವುದಲ್ಲದೆ 'ಕಲ್ಲು ಹೃದಯಿ' ಮತ್ತು 'ಪಾಪಿ' ಎಂಬ ಶಬ್ದಗಳನ್ನು ಬಳಸಲಾಗಿದೆ. ಚಂದ್ರಬತಿ ರಾಮನನ್ನು ಒಬ್ಬ ಬುದ್ಧಿಭ್ರಮಿತ (Wimp) ಎಂದು ಕರೆಯುತ್ತಾರೆ.

ಅಲ್ಲದೆ ಅವನನ್ನು ರಾಜ ಎನ್ನುವುದಕ್ಕಿಂತ ಭಯಂಕರವಾದೊಂದು ಪ್ರಾಣಿಯೆನ್ನುವಂತೆ ವರ್ಣಿಸುತ್ತಾರೆ; ಅಯೋಧ್ಯೆಯ ಪತನಕ್ಕೆ ಅವನೇ ಹೊಣೆ ಎಂದು ಆರೋಪಿಸುತ್ತಾರೆ. ದೇಶದ ಎಲ್ಲೆಡೆಯ ಗ್ರಾಮೀಣ ಮಹಿಳೆಯರು ಸೀತೆಯೊಂದಿಗೆ ನಿಸ್ಸಂಶಯವಾಗಿ ಗುರುತಿಸಿಕೊಳ್ಳುತ್ತಾರೆ. ರಾಮನು ಮಗುವಾಗಿ, ಪ್ರೇಮಿಯಾಗಿ ಅವರ ಪ್ರೀತಿಪಾತ್ರನಾದರೂ ಪತಿಯಾಗಿ ಕ್ರೂರಿ ಮತ್ತು ಅನ್ಯಾಯಿಯಾಗಿ ಅವರಿಗೆ ಕಂಡುಬರುತ್ತಾನೆ. ಜಗತ್ತನ್ನು ರಕ್ಷಿಸಲು ರಾಮನು ದೇವರಾಗಿ ಮತ್ತೆ ಬರುವುದರಲ್ಲಿದ್ದಾನೆ ಎನ್ನುವುದನ್ನು ಬಿಟ್ಟರೆ ಮಹಿಳಾ ಜನಪದ ಹಾಡುಗಳಲ್ಲಿ ಅವನು ಅಪರಿಪೂರ್ಣ ಮನುಷ್ಯನಾಗುತ್ತಾನೆ; ನಾಯಕ ನಾಗುವುದರಿಂದ ಬಹುದೂರವಿರುತ್ತಾನೆ.

## ತಬ್ಬಲಿ ಸೀತೆ

ಸೀತೆ ಒಬ್ಬ ಅನಾಥ ಹೆಣ್ಣು. ಇದಕ್ಕೆ ಸಂಬಂಧಿಸಿದ ಕೆಲವು ಹಾಡುಗಳನ್ನು ನೋಡೋಣ. ಮರಾಠಿಯ ದುಡಿಮೆಯ ಹಾಡೊಂದರಲ್ಲಿ ಸೀತೆ ಕಾಡಿಗೆ ಗಡೀಪಾರಾಗಿದ್ದಾಳೆ. ತನ್ನೊಂದಿಗೆ ಮಾತಾಡಲು ಯಾರೂ ಇಲ್ಲದಾಗ ಹಕ್ಕಿ-ಮರಗಳೊಂದಿಗೆ ಮಾತಾಡುತ್ತಿರುತ್ತಾಳೆ.

ಸೀತಾಬಾಯಿ ಹೇಳುತ್ತಾಳೆ:

"ನಾನೆಂಥ ಹೆಣ್ಣು ?
ರಾಮನಿಗೆನ್ನ ಕೊಟ್ಟಾಗ ನನಗೈದು ವರುಷಗಳು
ನನಗೆ ದೊರೆತ ತಾಯಪ್ರೇಮ ವೆಂಥದು ?
ಓ ದ್ರಾಕ್ಷಿ ಮರವೆ, ಪ್ರಿಯ ಬಾಬುಲ್ ಮರವೆ,
ಹೇಳುತಿಹಳೆ ಮಗೆ ಸೀತೆ ತನ್ನಾತ್ಮ ಕಥೆಯ
ಕೇಳಿದಯದಿ, ಕಂಡರೆನ್ನನು ನೇಗಿಲಕುಳದಿ
ಎಂತಿರಬಹುದೆನ್ನ ಜನನಿ-ಜನಕರು ?
ತೆರೆದ ಬಯಲಲಿ, ಪೆಟ್ಟಿಗೆಯಲ್ಲಿದ್ದವಳು"

(ಭಾವಾನುವಾದ)

ಒಂಟಿ ಮಹಿಳೆಯ ಸಂವಾದಿಸುವ ಕಾತರವನ್ನು ಇಲ್ಲಿ ಕಾಣಬಹುದು. ಈ ಒಂಟಿತನ ಮತ್ತು ಪ್ರೀತಿಯಿಂದ ವಂಚನೆಯ ಭಾವನೆಗಳು ಇತರ ಭಾಷೆಗಳಲ್ಲೂ ಪ್ರತಿಧ್ವನಿಸಿದೆ.

ಚಂದ್ರಬತಿಯ ಬಂಗಾಳಿ ಕವನವನ್ನು ನೋಡೋಣ. ಸೀತೆ ಲಕ್ಷ್ಮಣನಿಗೆ ಹೇಳುತ್ತಾಳೆ:

"ತಂದೆ-ತಾಯಿ ಇಲ್ಲದವಳು
ನೇಗಿಲ ಕುಳಕೆ ತಗುಲಿಕೊಂಡವಳು
ತಂದೆ, ತಾಯಿ, ಸೋದರ
ಯಾರೆಂದರಿಯದವಳು
ನದಿಯ ಪಾಚಿಯಂದದಿ
ತೀರದಿಂದ ತೀರಕೆ ತೇಲುವವಳು........."

(ಭಾವಾನುವಾದ)

ಸಮಕಾಲೀನ ಮರಾಠಿ ಕೃತಿಯೊಂದರಲ್ಲಿ ನಾನೂರು ವರ್ಷಗಳ ಹಿಂದಿನ ಬಂಗಾಳಿ ಕೃತಿಯ ಸೀತೆ ಹೀಗೆ ಬಿಂಬಿತಳಾಗಿದ್ದಾಳೆ:

"ತಂದೆ ತಾಯಿಯರ ಕಾಣದವಳು
ಕಾಡು ಹಣ್ಣುಗಳ ತಿಂದು ಕಾಡಲ್ಲಿ ಬೆಳೆದವಳು
ಸೋದರ-ಸೋದರಿಯನರಿದವಳು
ಗಡೀಪಾರಾಗಿದೆ ನನ್ನಾತ್ಮ
ಈ ದಟ್ಟ ಬನದ ಬದುಕಿನಲಿ"

(ಭಾವಾನುವಾದ)

ಮಿಥಿಲೆಯ ಹತ್ತಿರದ ಮೋಟಾನಾಗಪುರದ ಮುಂಡ ಎಂಬ ಗಿರಿ ಜನರ ಹಾಡಿಗಳಲ್ಲಿ ಸೀತೆಯ ನಿಟ್ಟುಸಿರು ನಮ್ಮ ಗಮನವನ್ನು ಸೆಳೆಯುತ್ತದೆ.

"ಹುಲ್ಲು ಗಾವಲಿನಲ್ಲಿ
ಕಂಡರೆನ್ನ ನೇಗಿಲ ಯೋಗಿಗಳು
ಕೊಂಡೊಯ್ದೊರು ರಾಜನರ ಮನೆಗೆ
ನಾ ಬೆಳೆದೆ ರುಚಿಯಾದ ಹಣ್ಣಿನಂತೆ

ಮದುವೆ ಮಾಡಿದ ಜನಕ ನನ್ನ ರಾಮನೊಂದಿಗೆ.
ಕಷ್ಟಗಳನೆಂದೂ ಮರೆಯೆ
ಸಂತಸವನೆಂದೂ ಕಾಣೆ"

**(ಭಾವಾನುವಾದ)**

ಈ ಮಹಿಳೆಯರು ಸೀತೆಯನ್ನು ಅನಾಥಳೆಂದು ಭಾವಿಸುತ್ತಾರೆಯೇ ಹೊರತು ರಾಜಕುಮಾರಿಯೆಂದಲ್ಲ, ಏಕೆ? ಬಂಗಾಳಿ ಮತ್ತು ಮೈಥಿಲಿಯಲ್ಲೂ ಸೀತೆಗೆ "ಜನಮ್ ದುಃಖಿನಿ" (ಕಷ್ಟಪಡಲೆಂದೇ ಹುಟ್ಟಿದವಳು) ಎಂಬ ಉಪಾಧಿ ಇದೆ. ಬದುಕಿನಲ್ಲಿ ಮೂಲಭೂತವಾಗಿ ಅರಕ್ಷಿತತೆ ಇರುವುದರಿಂದಲೇ ಈ ಎಲ್ಲಾ ಹಾಡುಗಳು ಸೀತೆಯನ್ನು ಅನಾಥಳು, ಅಸ್ತಿತ್ವ ಇಲ್ಲದವಳು, ಸದಾ ಗಡೀಪಾರಾದ ಆತ್ಮ ಎಂದು ಕಾಣುತ್ತವೆ.

## ವರಾನ್ವೇಷಣೆ

ಸೀತೆಯನ್ನು ಅನಾಥಳೆಂದು ಸಹಾನುಭೂತಿ ತೋರುವ ಮಹಿಳೆಯರು ಅವಳ ಸಾಕು ತಂದೆ ತಾಯಿಗಳ ಬಗ್ಗೆ ಅಪಾರ ಅನುಕಂಪವನ್ನು ತೋರುತ್ತಾರೆ. ಇದಕ್ಕೆ ಕಾರಣವೆಂದರೆ, ಅವರು ತಮ್ಮ ಮಗಳಿಗೆ ವರನನ್ನು ಹುಡುಕುವ ಜವಾಬ್ದಾರಿಯನ್ನು ಹೊತ್ತಿದ್ದಾರೆ ಎನ್ನುವುದೇ ಆಗಿದೆ. ಇಂದಿಗೂ ಭಾರತದ ಅದೊಂದು ದೊಡ್ಡ ಹೊರೆ ಎಂದೇ ಭಾವಿಸಲಾಗುತ್ತದೆ. ವರಾನ್ವೇಷಣೆಯನ್ನು ಕುರಿತ ಹಾಡು ಹೀಗಿದೆ:

"ರಾಜಕುಮಾರಿ ಸೀತೆ ನೆಲವ ತೊಳೆಯುತ್ತಾಳೆ
ಸೀರೆ ಅವಳ ಭುಜದಿಂದ ಜಾರುತ್ತದೆ
ರಾಣಿತಾಯಿ ತಂದೆಗೆ ಹೇಳುತ್ತಾಳೆ:
ಏಳು, ಎದ್ದೇಳು, ಜನಕ ಮಹಾರಾಜ!
ಇಲ್ಲೇನು ಮಾಡುತ್ತಿರುವೆ?
ಹೋಗು, ಸೀತೆಗೊಂದು ವರನನ್ನು ತಾ
ಅವಳು ಗಂಡನಿಗಾಗಿ ಸಿದ್ಧಳಾಗಿದ್ದಾಳೆ
ಜನಕನೀಗ ಏಳುತ್ತಾನೆ
ಶುಭ್ರ ಧೋತಿಯ ಧರಿಸುತ್ತಾನೆ
ತಲೆಯ ಮೇಲೆ ಪೇಟವ ಧರಿಸುತ್ತಾನೆ
ಕೈಯಲ್ಲಿ ರೈತನ ದೊಣ್ಣೆಯ ಹಿಡಿಯುತ್ತಾನೆ
ಮುಂಗರ್, ಮಗಧದತ್ತ ನಡೆಯುತ್ತಾನೆ. (ಸಂ.508)

**(ಭಾವಾನುವಾದ)**

ಇಲ್ಲಿ ಸೀತೆಯ ತಂದೆ ಒಬ್ಬ ಬಿಹಾರಿ ರೈತನಾಗಿದ್ದಾನೆ. ಮಗಳಿಗಾಗಿ ವರಾನ್ವೇಷಣೆಯಲ್ಲಿದ್ದಾನೆ.. ರಾಜನಿಗೆ ತಕ್ಕ ವರಾನ್ವೇಷಣೆಯ ಸಿದ್ಧತೆಗಳನ್ನು ಮಾಡುವುದಿಲ್ಲ.

ಇನ್ನೊಂದು ಹಾಡಿನಲ್ಲಿ ಬೇರೆಯೇ ಆದ ಪ್ರಸಂಗದ ಉಲ್ಲೇಖವಿದೆ. ಬಾಲಕಿ ಸೀತೆ ಅಂಗಳವನ್ನು ಸ್ವಚ್ಛಗೊಳಿಸುತ್ತಿರುತ್ತಾಳೆ. ಆಗ ಅವಳಿಗೊಂದು ಭಾರವಾದ ಬಿಲ್ಲು ಕಾಣುತ್ತದೆ. ಬಲಗೈನಿಂದ ಗುಡಿಸುತ್ತಿದ್ದ ಅವಳು ಎಡಗೈಯಲ್ಲಿ ಆ ಬಿಲ್ಲನ್ನು ಎತ್ತುತ್ತಾಳೆ. ಇದನ್ನು ಕಂಡ ಜನಕ ಪ್ರಜ್ಞಾ ಶೂನ್ಯನಾಗುತ್ತಾನೆ. ಏಕೆಂದರೆ ಅದನ್ನು ಅಲ್ಲಾಡಿಸಲು ಅವನಿಗೇ ಸಾಧ್ಯವಾಗಿರುವುದಿಲ್ಲ. ಈಗವನು ಪಶ್ಚಾತ್ತಾಪದ ಒಂದು ದೊಡ್ಡ ದನಿಯನ್ನು ಹೊರಡಿಸುತ್ತಾನೆ: "ಅಯ್ಯೋ, ಸೀತೆಯೀಗ ಅವಿವಾಹಿತಳಾಗಿಯೇ ಉಳಿದುಬಿಡುತ್ತಾಳೆ!(ಅಬ್ ಸೀತಾ ರಹಲಿ ಕುವಾರಿಯೊ!)" ಮಹಿಳೆಗೆ ತನಗಿಂತ ಶಕ್ತಿಶಾಲಿಯಾದ ಗಂಡನ ಅಗತ್ಯವಿರುತ್ತದೆ. ಸೀತೆಗೆ ಅಸಾಮಾನ್ಯ ಶಕ್ತಿಯಿದೆ. ಅವಳಿಗೆ ತಕ್ಕವನೆಂದರೆ ಆ ಬಿಲ್ಲಿಗೆ ಹೆದೆ ಏರಿಸಬಲ್ಲವನು ಮಾತ್ರವೇ. ಇದು ಜನಕನ ಚಿಂತೆ. ಇದೇ ಕಥೆಯು ಮೈಥಿಲಿ, ಬಂಗಾಳಿ, ತೆಲುಗು ಮತ್ತು ಮರಾಠಿ ಭಾಷೆಗಳಲ್ಲಿ ಸ್ವಲ್ಪ ಭಿನ್ನತೆಯೊಂದಿಗೆ ಕಂಡು ಬರುತ್ತದೆ.

ಮೈಥಿಲಿಯಲ್ಲಿ ಸೀತೆ ಸಕ್ರಿಯ ಪಾತ್ರವನ್ನು ವಹಿಸುತ್ತಾಳೆ. ಈ ಕಥೆ ಬೇರೆಲ್ಲೂ ಕಾಣುವುದಿಲ್ಲ. ಉದಾಹರಣೆಗೆ, ಆಹ್ವಾನಿತರಾದ ಕನ್ಯಾರ್ಥಿಗಳೆಲ್ಲರೂ ಬಿಲ್ಲಿಗೆ ಹೆದೆಯೇರಿಸುವ ಸ್ಪರ್ಧೆಯಲ್ಲಿ ಒಬ್ಬರಾದ ಮೇಲೊಬ್ಬರು ಸೋಲುತ್ತಾರೆ; ಸೀತೆಯ ತಂದೆತಾಯಿಗಳು ಗಾಬರಿಯಾಗುತ್ತಾರೆ - "ಅಬ್ ಸೀತಾ ರಹಲ ಕುಮಾರಿ, ಧನುಷಾ ನ ಟೂಟಲಹೆ! (ಈಗ ಸೀತೆ ಕನ್ಯೆಯಾಗಿಯೇ ಉಳಿಯುತ್ತಾಳೆ, ಬಿಲ್ಲು ಮುರಿಯದೆ ಹಾಗೇ ಉಳಿದುಕೊಳ್ಳುತ್ತದೆ!)" ಇದರಿಂದ ನಿರಾಶೆಗೊಂಡ ಸೀತೆ ಮನೆಯ ಮಾಡಿನ ಮೇಲೆ ಹತ್ತಿ ಕೂಗಿಕೊಳ್ಳುತ್ತಾಳೆ: "ಓ ಅಮ್ಮಾ, ಈ ಜಗತ್ತಿನಲ್ಲಿ ಈ ಬಿಲ್ಲಿಗೆ ಹೆದೆಯೇರಿಸಿ ನನ್ನ ತಂದೆಯ ಪಣವನ್ನು ಗೆಲ್ಲುವ ಶಕ್ತಿಶಾಲಿ ಯಾರೂ ಇಲ್ಲವೆ?" (ಊಂಚಿ ಝುರೋಖೆ ಭಡಿಸಿಯಾ ಚಾಹುಂಡಿಶಿ ಚಿತ್ವತಿಹೆ। ಮಾಯಿ ಹೆ, ನಹಿ ಕೋಯಿ ದುನಿಯಾ ಮೆ ಬರ್ ಪಿಟಿ-ಪ್ರಾಣ್ ರಖತಾ ಹೈ?) ಸಿಡುಕು ಸ್ವಭಾವದ ಲಕ್ಷ್ಮಣ ಇದನ್ನು ಕೇಳಿ ಕುಪಿತನಾಗುತ್ತಾನೆ : "ಅವಳೇಕೆ ನಿರಾಶಳಾಗಿದ್ದಾಳೆ? ರಾಮ ತನ್ನದೇ ಆದ ಮಧುರ ಕ್ಷಣದಲ್ಲಿ

ಬಂದು ಬಿಲ್ಲನ್ನು ಹೆದೆಗೇರಿಸುತ್ತಾನೆ" ಎನ್ನುತ್ತಾನೆ. ಆದರೆ ಸೀತೆಗೆ ಆವಕಾಶಕ್ಕಾಗಿ ಕಾಯುವ ತಾಳ್ಮೆ ಇರಲಿಲ್ಲ.

ಮೈಥಿಲಿ ಭಾಷೆಯ ಹಾಡೊಂದು ಯಾವುದೇ ಪೂರ್ವಪೀಠಿಕೆಗಳಿಲ್ಲದೆ ಆರಂಭವಾಗುತ್ತದೆ. ಸೀತೆ ತಾನೇ ತನ್ನ ತಂದೆಯ ಬಳಿಗೆ ಹೋಗಿ ಹೇಳುತ್ತಾಳೆ: "ಸುನು ಬಾಬಾ, ಆರಜಿ ಹಮಾರಿಯೊ, ಕುಮಾರಿ ಕಟಿಕ್ ದಿನ ರಖಾವಾ? ಐ ಹೊನೆ ಉಚಿತ್ ವ್ಯವಹಾರ್ ಯೊ! (ಕೇಳಪ್ಪ, ನಿನಗೊಂದು ಹೇಳ ಬೇಕಾಗಿದೆ. ನೀವು ಎಷ್ಟು ಕಾಲ ನನ್ನನ್ನು ಅವಿವಾಹಿತಳಾಗಿಯೇ ಇಟ್ಟುಕೊಳ್ಳ ಬೇಕೆಂದಿದ್ದೀರಿ? ಇದು ಸರಿಯಲ್ಲ)". ಇದನ್ನು ಕೇಳಿದ ಜನಕ ಆ ಕೂಡಲೆ ಜ್ಯೋತಿಷಿಗಳನ್ನು ಕರೆಸಿಕೊಳ್ಳುತ್ತಾನೆ. ದೇವರ ದಯೆಯಿಂದ ಲಕ್ಷ್ಮಣ ಇದನ್ನು ಕೇಳಿಸಿಕೊಳ್ಳಲಿಲ್ಲ!

ಈ ಎಲ್ಲಾ ಹಾಡುಗಳಲ್ಲಿ ರಾವಣನು ರಾಜಕುಮಾರರು ನೆರೆದಿದ್ದ ಸ್ವಯಂವರದ ಸಭೆಗೆ ಕನ್ಯಾರ್ಥಿಯಾಗಿ ಬರುತ್ತಾನೆ; ಬಿಲ್ಲನ್ನು ಎತ್ತಲು ಹೋಗಿ ಮುಗ್ಗರಿಸಿ ಬೀಳುತ್ತಾನೆ. ಸೀತೆಗೆ ನಗುವನ್ನು ತಡೆಯಲಾಗುವುದಿಲ್ಲ. ಇದರಿಂದ ಅವಮಾನಿತನಾದ ರಾವಣ ಎಂದಾದರೊಂದು ದಿನ ಬಲಾತ್ಕಾರದಿಂದ ಪಡೆಯುವ ಪ್ರತಿಜ್ಞೆಯನ್ನು ಮಾಡುತ್ತಾನೆ. ಹತ್ತು ತಲೆಗಳ ರಾಕ್ಷಸ ಹೇಗೆ ಹೀನಾಯವಾಗಿ ಸೋತನೆನ್ನುವುದನ್ನು ಮಹಿಳೆಯರು ಬಹಳ ಸಂತಸದಿಂದ ವರ್ಣಿಸುತ್ತಾರೆ. ಈ ವರ್ಣನೆಗಳು ತೆಲುಗು, ಮರಾಠಿ, ಬಂಗಾಳಿ, ಮೈಥಿಲಿಗಳಲ್ಲಿ ಒಂದೇ ತೆರನಾಗಿವೆ. ರಾವಣನಿಗೆ ವಿರುದ್ಧವಾಗಿ, ಎಳೆವಯಸ್ಸಿನ (ಕಿಶೋರಾವಸ್ಥೆಯ), ಎತ್ತರದ, ಶ್ಯಾಮಲವರ್ಣದ ಸುಂದರ ರಾಮನಿದ್ದಾನೆ. ಈ ಕೃಶದೇಹಿ, ಕನಸುಗಾರನಂತಿದ್ದ ರಾಮನಿಗೆ ಬಿಲ್ಲನ್ನು ಎತ್ತಲಾಗುವುದೋ ಇಲ್ಲವೋ ಎನ್ನುವ ಆತಂಕ ಸೀತೆಗೆ. ಅವಳು ತನ್ನ ತಂದೆಯನ್ನು ಅಂಥ ಕಠಿಣ ಪಣವೊಂದನ್ನು ಇಟ್ಟಿದ್ದಕ್ಕಾಗಿ ಬಯ್ಯುತ್ತಾಳೆ. ಆದರೇನು ಆ ಎಳೆಯ ಹುಡುಗ ಗೆಲ್ಲುತ್ತಾನೆ; ಆ ಬಿಲ್ಲನ್ನು ಮುರಿಯುತ್ತಾನೆ.

## ಬಾಲವಧು

ಬಾಲವಧುವಿನ ವಿಷಯಕ್ಕೆ ಬಂದರೆ, ಸೀತೆಯನ್ನು ವಿವಾಹಕ್ಕೆ, ಗಂಡನ ಮನೆಗೆ ಸಿದ್ಧಗೊಳಿಸುವ ಹಾಡುಗಳಲ್ಲಿ ಭಾರತೀಯ ಮಹಿಳೆಯ ಅಂತರಂಗದ ದನಿಯಿದೆ. ಚಿಕ್ಕ ಹುಡುಗಿ ವಯಸ್ಕ ಜೀವನಕ್ಕಿನ್ನೂ ಕಾಲಿಡುತ್ತಿರುವವಳನ್ನು ಪರಕೀಯ ಪರಿಸರಕ್ಕೆ ವಿವಾಹ ಮಾಡಿ ಕಳಿಸಿದುದಕ್ಕೆ ಶೋಕ ವ್ಯಕ್ತವಾದಂತೆ ಕಾಣುತ್ತದೆ. ಈ ತೆಲುಗು ಹಾಡನ್ನು ನೋಡಿ:

"ಈ ಪುಟ್ಟ ಹುಡುಗಿ ಏಳು ಮಲ್ಲಿಗೆಯ ಎತ್ತರದವಳು
ಬಿಸಿಲು-ಮಳೆಗಳ ಸಹಿಸಳು
ಇಂಥ ಸುಂದರ ಹುಡುಗಿಗೆ ರಾಮನೊಂದಿಗೆ ಆಗಿದೆ ಮದುವೆ."

(ಭಾವಾನುವಾದ)

ಇದು ಬಾಂಗ್ಲಾ ದೇಶದ ಬಂಗಾಳಿಹಾಡು:

"ತುಸುವೇ ನೀರನ್ನು ಸುರಿ
ಟವಲ್ಲಿ ನಿಂದ ಕೂದಲನೊರೆಸು
ಇಲ್ಲವೆಂದರೆ, ಸೀತೆಗಾಗಬಹುದು ಶೀತ."

(ಭಾವಾನುವಾದ)

(ಅಲ್‌ಪೊ ಅಲ್‌ಪೊ ಧಾಯ್‌ಲೊರೆಜಾ । ಸಿತಾರ್ ಹೊಯ್‌ಬೊಸರ್ದಿಜಾರ್ । ಗಂಛ ದಿಯ ತುಯಿಲೊ ಕೆಶೆರ್ ಜಲ್‌ಗೊ)

ಇಲ್ಲಿ ಸೀತೆಯ ಚಿಕ್ಕಮ್ಮಂದಿರು ಸ್ನಾನ ಮಾಡಿಸುತ್ತಿದ್ದಾರೆ. ಮೂಲತಃ ಬಾಲ್ಯವಿವಾಹದ ವಿರೋಧಾಭಾಸ ಈ ಹಾಡಿನಲ್ಲಿ ವ್ಯಕ್ತವಾಗಿದೆ. ತನ್ನನ್ನು ತಾನು ನೋಡಿಕೊಳ್ಳಲಾಗದಷ್ಟು ದೈಹಿಕವಾಗಿ ಚಿಕ್ಕವಳಾದ ಹುಡುಗಿಗೆ ಪತ್ನಿಯ ಸಾಮಾಜಿಕ ಜವಾಬ್ದಾರಿಯನ್ನು ಹೊರುವಂತೆ ಬಲಾತ್ಕರಿಸಲಾಗಿದೆ.

## ವಧುವನ್ನೊಪ್ಪಿಸುವುದು

ವಧುವನ್ನೊಪ್ಪಿಸುವ ಸಂದರ್ಭದ ಹಾಡುಗಳಲ್ಲಿ ಪೋಷಕರ ಆತಂಕ ಬಹಳ ತೀವ್ರವಾಗಿ ವ್ಯಕ್ತವಾಗಿದೆ. ತೆಲುಗು ಹಾಡೊಂದರಲ್ಲಿ ಜನಕರಾಜ ರಾಮನ ತಂದೆಯಾದ ದಶರಥನನ್ನು ಮದುವೆ ಸಬಾಂಗಣಕ್ಕೆ ಕರೆದೊಯ್ಯುತ್ತಾನೆ. ಅಲ್ಲಿ ದೊಡ್ಡ ಹಾಸಿಗೆಯೊಂದರಲ್ಲಿ ಮಲಗಿ ನಿದ್ರಿಸುತ್ತಿದ್ದ ಚಿಕ್ಕ ಬಾಲಕಿ ಸೀತೆಯನ್ನು ಅವನಿಗೆ ತೋರಿಸುತ್ತಾನೆ. "ನೋಡಿ, ಆ ಹೂವಿನ ಹಾಸಿಗೆಯಲ್ಲಿ ಅವಳೆಷ್ಟು ಅಸಹಾಯಕಳಾಗಿ ಕಾಣುತ್ತಾಳೆ- ಅವಳಿನ್ನೂ ಮುಗ್ಧ ಮಗು" ಎನ್ನುತ್ತಾನೆ. ವೈವಾಹಿಕ ಅತ್ಯಾಚಾರದ ಸಾಧ್ಯತೆಯ ಬಗ್ಗೆ ಇಲ್ಲಿ ಸ್ಪಷ್ಟ ಸೂಚನೆಯಿದೆ. ವಧುವಿನ ತಂದೆ ಅಂಥ ಕ್ರಿಯೆಯ ಹಿಂದಿರುವ ಕ್ರೌರ್ಯದ ಅರಿವನ್ನು ಮಾಡಿಕೊಡುವ ನಯವಾದ ಪ್ರಯತ್ನ ಇಲ್ಲಿದೆ. ಬಾಲವಧುವನ್ನು ಕುರಿತ

ಎಲ್ಲಾ ಹಾಡುಗಳಲ್ಲಿ ಪೋಷಕರ ಆತಂಕ ತೀವ್ರವಾಗಿ ವ್ಯಕ್ತವಾಗಿದೆ.

ತೆಲುಗು ಹಾಡೊಂದರಲ್ಲಿ, ಸೀತೆಯ ತಾಯಿಯಾದ ಭೂದೇವಿ ರಾಮನ ತಾಯಿಯೊಂದಿಗೆ ಮಾತುಕತೆಗಳ ನಡುವೆ ಹೀಗೆ ಹೇಳುತ್ತಾಳೆ:

"ಇಂದಿನಿಂದ ಸೀತಮ್ಮ ನಿಮ್ಮ ಮಗಳಾದಳು
ಅವಳೇನೂ ಅರಿಯಳು
ಹಾಲು ಕಾಯಿಸಲು ಕಲಿಸಿ
ಬೆಣ್ಣೆ ತುಪ್ಪವ ಮಾಡಲು ಕಲಿಸಿ
ಮನೆಗೆಲಸವನಿನ್ನೂ ಕಲಿತಿಲ್ಲ."

**(ಭಾವಾನುವಾದ)**

ಸೀತೆ ಗಂಡನ ಮನೆಗೆ ಹೊರಟಾಗ ಅವಳಿಗೆ ಬುದ್ಧಿವಾದ ಹೇಳುವ ಹಾಡು ಅವಳೀಗ ಬಾಲಕಿಯಾಗಿಲ್ಲದೆ ಮಹಿಳೆಯಾಗಿ ವರ್ತಿಸುವ ಕಾಲ ಬಂದಿದೆಯೆನ್ನುವುದನ್ನು ಸೂಚಿಸುತ್ತದೆ.

"ಹೋಗದಿರು ನೆರೆ ಮನೆಗೆ ಕತ್ತಲಲಿ
ಹೋಗದಿರು ಅಗಸನ ಮನೆಗೆ ಸಂಜೆಯಲಿ
ಬಿಚ್ಚದಿರು ಕೂದಲ ಬೀದಿಯಲಿ
ಹಲ್ಲುಗಳ ತೋರದಿರು ನಿನ್ನ ನಗುವಿನಲಿ
ಅತ್ತಿತ್ತ ನೋಡದಿರು ಜನಸಮೂಹದಲಿ
ಕಣ್ಣು ಬಾಗಿರಲಿ ಎಲ್ಲರೆದುರಿನಲಿ
ಹೆಜ್ಜೆಯನಿಡದಿರು ಅಡಿಗೆ ಮನೆಯಲಿ
ಬತ್ತದ ಹೊಟ್ಟು ಚೆಲ್ಲಿದ ನೆಲದಲಿ."

**(ಭಾವಾನುವಾದ)**

## ಸಸುರಬಾಸ್(ಮಾವನ ಮನೆ(ಯಲ್ಲಿ)ವಾಸ)

ಇವೆಲ್ಲಾ ಬುದ್ಧಿವಾದಗಳ ನಡುವೆ ಬಾಲವಧು ಗಂಡನ ಮನೆಯಲ್ಲಿ ಕಷ್ಟಪಡುತ್ತಾಳೆ. ಮಾರಾಠಿಯ ಸೀತೆಯ ಸಸುರಬಾ ಹಾಡುಗಳು ಅತ್ತೆ ಸೊಸೆಗೆ ಕೊಡುವ ಹಿಂಸೆಯ ಚಿತ್ರವನ್ನು ಕೊಡುತ್ತದೆ. ಸಸುರಬಾ ಎನ್ನುವುದು ಮರಾಠಿ ಮಹಿಳಾ ಹಾಡುಗಳಲ್ಲಿ ಒಂದು ಮಹತ್ವದ ಪ್ರಕಾರ. ರಾಮಾಯಣವನ್ನು ಮಹಿಳೆಯರು ಮರುಕಥನ ಮಾಡಿದಾಗ ವಕ್ರ ಅದೃಷ್ಟರೇಖೆಯೊಂದಿಗೆ ಹುಟ್ಟಿದ ಬಾಲಕಿಯೊಬ್ಬಳ ಕಥೆಯಾಗುತ್ತದೆ:

"ಸೀತೆಯ ಹಣೆಯ ಮೇಲೆ
ಅದೃಷ್ಟ ರೇಖೆಯನೆಳೆವಾಗ
ಬ್ರಹ್ಮ ಆತುರದಲ್ಲಿದ್ದ
ರೇಖೆ ಡೊಂಕಾಯಿತು"

**(ಭಾವಾನುವಾದ)**

ಸೀತೆಯ ಸಸುರಬಾಸದ ಮಾದರಿ ಹೀಗಿದೆ:

"ರಾಮ ಸೀತೆಗೆ ತನ್ನ ಪ್ರೀತಿಯ ಕೊಟ್ಟ
ಸಣ್ಣ ಹುಣಿಸೆ ಎಲೆಯೊಂದರಲಿ
ವಿಷವ ಸುರಿದಳು ಕೈಕೇಯಿ ರಾಮನ ಕಿವಿಗಳಲಿ
ಕಾದಳು ಚೇಳಿನಂತೆ ಬಾಗಿಲ ಮರೆಯಲಿ
ರಾಮನೊಬ್ಬನೇ ತಾಂಬೂಲವ ಜಗಿಯುವನು
ತಾನೊಬ್ಬನೇ... ಒಂಟಿಯಾಗಿ.

**(ಭಾವಾನುವಾದ)**

ಹುಣಿಸೇ ಎಲೆಗಳು ಚಿಕ್ಕದಾಗಿರುತ್ತವೆ. ರಾಮ ಸೀತೆಗೆ ಕೊಡುವ ಪ್ರೀತಿಯ ಪ್ರಮಾಣ ಅಷ್ಟೆ. ಅದಕ್ಕಿಂತ ಅವನಲ್ಲಿ ಹೆಚ್ಚೇನೂ ಇರಲಿಲ್ಲ ಎನ್ನುವ ವ್ಯಂಗ್ಯ ಒಂದೆಡೆಯಾದರೆ, 'ಒಬ್ಬನೇ ತಾಂಬೂಲವ ಜಗಿಯುವುದು', ಸೀತೆಗೆ ರಾಮನ ಸಂಗ ದೊರೆಯುತ್ತಿಲ್ಲ, ಅವನು ವಿರಮಿಸುವಾಗಲೂ ಅವನ ಮಲತಾಯಿ ಅದಕ್ಕೆ ಅಡ್ಡಿ ಬರುತ್ತಿದ್ದಳೆಂದು ತಿಳಿಸುತ್ತದೆ.

ಕಾಲಕಾಲಕ್ಕೆ ಈ ವರ್ಣನೆ ಹೆಚ್ಚು ಸ್ಪಷ್ಟವಾಗುತ್ತಾ ಹೋಗುತ್ತದೆ.

"ಸೀತೆ ಪ್ರತಿಯೊಬ್ಬರಿಂದಲೂ ಹಿಂಸೆಗೊಳಗಾಗು-ತ್ತಿದ್ದಳು
ಹನ್ನೆರಡು ವರ್ಷಗಳ ಕಾಲ ಅವಳಿಗೆ ಕೇವಲ
ಬೇವಿನೆಲೆಯನ್ನು ಕೊಟ್ಟರು.
ಹನ್ನೆರಡು ವರ್ಷಗಳ ಕಾಲ ಹಣೆಗೆ ಕುಂಕುಮ-ವನ್ನಿಡಲು ಬಿಡುತ್ತಿರಲಿಲ್ಲ.
ಅವಳ ಕೂದಲು ಸಿಕ್ಕಾಗಿದೆ.
ಅದನ್ನು ಹನ್ನೆರಡು ವರ್ಷಗಳ ಕಾಲ ತೊಳೆಯಲು ಬಿಡಲಿಲ್ಲ."

**(ಭಾವಾನುವಾದ)**

ಮೇಲಿನ ಹಾಡು ಕುಟುಂಬದಲ್ಲಿ ದೈಹಿಕ ಮತ್ತು ಮಾನಸಿಕ ಕಿರುಕುಳದ ಸ್ಪಷ್ಟ ಚಿತ್ರವನ್ನು ನೀಡುತ್ತದೆ. ಅವಳಿಗೆ ತಿನ್ನಲು ಅಥವಾ ಕೂದಲನ್ನು ಬಾಚಿಕೊಳ್ಳಲು ಅಥವಾ ಲೈಂಗಿಕ ಸುಖವನ್ನು ಪಡೆಯಲು ಅವಕಾಶ ನೀಡುವುದಿಲ್ಲ.

"ಅವಳು ತನ್ನ ಮಲಗುವ ಕೋಣೆಯಲ್ಲೇ
ಗಡೀಪಾರಾಗಿದ್ದಾಳೆ
ಹನ್ನೆರಡು ವರುಷಗಳವರೆಗೆ ರಾಮ
ಹಾಸಿಗೆಯನ್ನು ಅವಳೊಂದಿಗೆ ಹಂಚಿಕೊಳ್ಳಲಿಲ್ಲ.
ಅವಳು ಏಳು ಬಾಗಿಲುಗಳ ಹಿಂದೆ
ಬಂಧಿಯಾಗಿದ್ದಳು
ರಾಮ ತನ್ನದೇ ವ್ಯಾಪಾರದಲ್ಲಿ ಮುಳುಗಿದ್ದ
ಪಾಪದ ಸೀತೆಯ ಯೌವ್ವನ ಹೀಗೆ ವ್ಯರ್ಥವಾಯಿತು."

(ಭಾವಾನುವಾದ)

ಇಂಥ ಹಿಂಸೆ ಅವಾಸ್ತವವೆನಿಸಿದರೂ, ಗತಕಾಲಕ್ಕೆ ಅನ್ವಯಿಸುವಂಥದು ಎಂದನ್ನಿಸಿದರೂ ಇಂದಿನ ಮಹಿಳೆಯರ ಪರಿಸ್ಥಿತಿಯ ಭಾಗವೇ ಆಗಿದೆಯೆನ್ನಬಹುದು. ಸೀತೆಗಾಗಿ ಮಹಿಳೆಯರು ಅಳುತ್ತಾರೆಂದರೆ, ಸೀತೆಯಂತಿರುವ ತಮಗಾಗಿಯೇ ಆಗಿರುತ್ತದೆ. ಸೀತೆಯಂತೆಯೇ ಅವರೂ ಎಲ್ಲೆ ಮೀರದಂತೆ ನಿರ್ಬಂಧಿತರಾಗಿದ್ದಾರೆ. ಭಾರತೀಯ ಮಹಿಳೆಯರು ಮೌನವಾಗಿ ಕಷ್ಟಪಡುತ್ತಾರೆ, ದುಃಖಿಸುತ್ತಾರೆ; ಅವರು ದೂರುವುದಿಲ್ಲ. ಅಂಥವರಿಗೆ ಗೆಳತಿಯರೊಂದಿಗೆ ತಮ್ಮ ನೋವನ್ನು ಹಂಚಿಕೊಳ್ಳು-ವುದೊಂದೇ ಅವರಿಗಿರುವ ದಾರಿಯಾಗಿದೆ.

## ಗರ್ಭಿಣಿಯ ಬಯಕೆಗಳು

ಮಹಿಳಾ ಹಾಡುಗಾರ್ತಿಯರು ಸೀತೆ ಗರ್ಭಿಣಿಯಾದ ಅವಧಿಯಲ್ಲಿ ಅವಳ ಆಸೆಗಳಿಗೆ ಹೆಚ್ಚು ಗಮನವನ್ನು ನೀಡುತ್ತಾರೆ. 'ಸೀತೆ ಒಬ್ಬ ವ್ಯಕ್ತಿಯಾಗಿ ಏನನ್ನು ಬಯಸುತ್ತಾಳೆ?' ಎನ್ನುವುದರ ಬಗ್ಗೆ ಸೀತೆಯ ಗಂಡನಾದ ರಾಮನಾಗಲೀ ಅಥವಾ ಮಹಾಕಾವ್ಯ ಬರೆದ ವಾಲ್ಮೀಕಿಯಾಗಲೀ ಯಾವುದೇ ಕಾಳಜಿಯನ್ನು ಹೊಂದಿಲ್ಲ ಎನ್ನುವುದನ್ನು ಪ್ರಶ್ನಿಸುತ್ತಾರೆ. ಈ ತೆಲುಗು ಹಾಡಿನಲ್ಲಿ ಸೀತೆ ಮೂರು ತಿಂಗಳ ಗರ್ಭಿಣಿ. "ಸೀತಮ್ಮಳ ಹೃದಯ ಏನನ್ನು ಬಯಸುತ್ತದೆ ?" ಅದು ಹುಲಿಯ ಹಾಲನ್ನಲ್ಲದೆ ಮತ್ತೇನನ್ನೂ ಅಲ್ಲ. ಅವಳ ಪ್ರೀತಿಯ ಮೈದುನ ಲಕ್ಷ್ಮಣ ಅದನ್ನು ಕಾಡಿನಿಂದ ತಂದುಕೊಡುತ್ತಾನೆ. "ಆದರೆ ತಮ್ಮಾ ಲಕ್ಷ್ಮಣ, ನನ್ನ ಮನದಲ್ಲಿ ಮತ್ತೊಂದು ಬಯಕೆ ಇದೆ." ಎನ್ನುತ್ತಾಳೆ ಸೀತೆ. "ಅದೇನದು" ಎಂದ ಲಕ್ಷ್ಮಣನಿಗೆ ಸೀತೆಯ ಉತ್ತರ ಹೀಗಿದೆ:

"ದೂರದ ನೀಲಿ ಸಾಗರ
ಅದರ ಮಧ್ಯದಲೊಂದು ಮರಳದಂಡೆ
ಅದರ ನಡುವಿನಲೊಂದು ತೇಗದ ಮರ
ತೇಗದ ಮರದಲ್ಲೊಂದು ವಿಶಿಷ್ಟ ಜೇನುಗೂಡು
ಆ ಜೇನು ತುಪ್ಪದಲಿ ಸಾದಾದೋಸೆ ತಿನ್ನುವ ಬಯಕೆ."

(ಭಾವಾನುವಾದ)

ಸೀತೆಯ ಇಂಥ ಬಯಕೆ ಅವಳ ಅತ್ತೆಗೆ ಹಿಡಿಸುವುದಿಲ್ಲ. ಅವಳು ಟೀಕಿಸುತ್ತಾಳೆ:

"ಹ್ಞು, ನಾನೂ ಒಮ್ಮೆ ಗರ್ಭಿಣಿಯಾಗಿದ್ದೆ; ರಾಮ ಮತ್ತು ಲಕ್ಷ್ಮಣರನ್ನು ಹೆತ್ತಿದ್ದೆ. ಆದರೆ ನಾನೆಂದಾದರೂ ಅಂಥ ದೂರದಲ್ಲೆಲ್ಲೋ ಇರುವ ವಸ್ತುವನ್ನು ಬಯಸಿದ್ದನೆ ? ನಾನು ತುಂಬಾ ಹಂಬಲಿಸಿದ್ದು ಕೇವಲ ಮಾವಿನ ಕಾಯಿಗಳು ಮತ್ತು ತೆಂಗಿನಕಾಯಿ...... ಮರಾಠಿ ಹಾಡೊಂದರಲ್ಲಿ ಸೀತೆ ವಿವಿಧ ಹಣ್ಣು ತರಕಾರಿಗಳಿಗಾಗಿ ಹಂಬಲಿಸುತ್ತಾಳೆ. ಅದರಲ್ಲಿ ಕ್ಯಾರೆಟ್ ಕೂಡ ಸೇರಿರುವುದೊಂದು ವಿಶೇಷ. ಅದನ್ನು ತರಲು ರಾಮ ಮಾರುಕಟ್ಟೆಗೆ ಹೋಗುತ್ತಾನೆ. ಇವೆಲ್ಲವೂ ಆಸೆ ಈಡೇರಿಕೆಯ ಹಾಡುಗಳೆನ್ನುವುದು ಸ್ಪಷ್ಟವಾಗುತ್ತವೆ. ಈ ಹಾಡುಗಳಲ್ಲಿ ಲಕ್ಷ್ಮಣನು ಪದೇ ಪದೇ ಕಾಣಿಸಿಕೊಂಡರೆ ರಾಮನು ಅಪರೂಪಕ್ಕೆ ಕಾಣುತ್ತಾನೆ.

## ಗಡೀಪಾರು

ತನ್ನ ಹೆಂಡತಿಯನ್ನು ಕಾಡಿಗೆ ಕಳುಹಿಸಿದ ನಂತರ ರಾಮನಿಗೆ ಏನನ್ನಿಸಿತು? ಅದಕ್ಕೆ ಉತ್ತರ ಮಹಿಳೆಯರಲ್ಲಿದೆ. ಮರಾಠಿ ಹಾಡೊಂದರಲ್ಲಿ ಸೀತೆಯನ್ನು ಗಡೀಪಾರು ಮಾಡಿದ ರಾಮ ನಂತರ ದುಃಖಿಸುತ್ತಾನೆ. ಆದರೆ ಆ ದುಃಖ ಯಾವ ರೀತಿಯದು ? ರಾಮನು ತನ್ನ ಶಾಲಿನ ಅಂಚಿನಿಂದ ತನ್ನ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ಅಳುತ್ತಾನೆ- "ಸೀತೆಯಂಥ ರಾಣಿಯನ್ನು ಎಲ್ಲಿಂದ ತರಲಿ? ನೆಲಕ್ಕೆ ನೀರನ್ನು ಅವಳಷ್ಟು ಚೆನ್ನಾಗಿ ಹಾಕುವವರು ಯಾರಿದ್ದಾರೆ? ನನ್ನ ಧೋತಿಗಳನ್ನು ಯಾರು ಕೊಡುತ್ತಾರೆ? ಸೀತೆ ಕೊಡುತ್ತಿದ್ದಂಥ ಊಟವನ್ನು ಯಾರು ಕೊಡುತ್ತಾರೆ? ಸೀತೆ ಗಡೀಪಾರಾಗಿದ್ದಾಳೆ. ಈಗ ನನಗೆ ಒಳ್ಳೆಯ ಹಾಸಿಗೆಯನ್ನು ಹಾಸುವವರ್ಯಾರು ? ಗಂಧವನ್ನು ತೇದು ಕೊಡುವವರಾರು? ತಮ್ಮಾ ಲಕ್ಷ್ಮಣ, ಈ ಸುಖದ ಅರಮನೆಯನ್ನು ಮುಚ್ಚಿ ಬಿಡೋಣ" ಎನ್ನುತ್ತಾನೆ. ಅವನು ಕಾಲಿನಿಂದ ಒದೆದ ಮಂಚ ಮಗ್ಗುಲಾಗಿ ಬೀಳುತ್ತದೆ. ಕೆನ್ನೆಯ ಮೇಲಿನ ಕಣ್ಣೀರು ಕೊಳವೆಯಿಂದ ಹರಿಯುವ ಮಳೆನೀರಿನಂತೆ ಹರಿಯುತ್ತದೆ. ಸೀತೆಯನ್ನು

ಮನೆಯಿಂದ ಓಡಿಸಿದ ಮೇಲೆ, ರಾಮನು ಒಬ್ಬ ಸೇವಕಿ, ಅಡಿಗೆಯುವಳು, ಹಾಸಿಗೆ ಹಾಸುವವಳು, ಮನೆ ನಿರ್ವಹಿಸುವವಳು ಮತ್ತು ಲೈಂಗಿಕ ಸುಖವನ್ನು ನೀಡುವವಳನ್ನು ಕಳೆದುಕೊಂಡಿದ್ದಾನೆ. ಅದೊಂದು ದೊಡ್ಡ ನಷ್ಟವೇ ಸರಿ.

ಬಾಂಗ್ಲಾದೇಶೀ ಹಾಡೊಂದರಲ್ಲಿ, ಸೀತೆಯನ್ನು ಗಡೀಪಾರು ಮಾಡಿದ್ದಕ್ಕಾಗಿ ರಾಮನ ದುಃಖ ಪಶ್ಚಾತ್ತಾಪದ ಹಂತವನ್ನು ತಲುಪುತ್ತದೆ. ಅವನು ತನ್ನ ಜೀವದ ಉಸಿರಾದ ಸೀತೆಯನ್ನು ಹಿಂದಕ್ಕೆ ಕರೆತರುವಂತೆ ಲಕ್ಷ್ಮಣನನ್ನು ಬೇಡಿಕೊಳ್ಳುತ್ತಾನೆ. "ಅಯ್ಯೋ, ಅವಳನ್ನು ಕಾಡಿಗೆ ಕಳುಹಿಸಲು ನನಗೆ ಹೇಗಾದರೂ ಸಾಧ್ಯವಾಯಿತು? ಎಂದು ಪರಿತಪಿಸುತ್ತಾನೆ. (ಸೀತಾ ಅಮರ್ ಜಾನೇರ್ ಜಾನ್/ಸೀತಾ ಅಮರ್ ಪ್ರಾಣೇರ್ ಪ್ರಾಣ್/ಸೀತಾ ಬಿನಾ ಬಂಚೆ ನ ಜೀವನ್/ ಬೈರೇ ಲಕ್ಷ್ಮಣ್ ಪಾಯೆ ಪರಿ ಸೀತಾ ಐನದೆ/ ಕಿ ಕರಿಯಾ ದಿಲಮ್ ವಿಸರ್ಜನ್).

ಸೀತೆ ತನ್ನ ಗಡೀಪಾರಿಗೆ ಹೇಗೆ ಸಿದ್ಧಳಾದಳೆನ್ನುವುದನ್ನು ಮರಾಠಿ ಹಾಡೊಂದರಲ್ಲಿ ಕಾಣಬಹುದು. "ರಥವು ಕಾಯಬೇಕು ಮೊದಲಿಗೆ ಸೀತೆ ಮಾಡಲೇ ಬೇಕಾದ ಕೆಲವು ಕೆಲಸ/ಕರ್ತವ್ಯಗಳಿವೆ. ಉಡುಪುಗಳ ಸಾಲಿನಲ್ಲಿರುವ ರಾಮನ ಶಾಲನ್ನು ಎತ್ತಿಕೊಳ್ಳಲು ಸೀತೆ ತನ್ನ ದಾಸಿಗೆ ಹೇಳುತ್ತಾಳೆ. ರಾಮನು ಊಟಮಾಡುವಾಗ ಕಾದು ನಿಲ್ಲುತ್ತಾಳೆ. ಅವನ ಉಡುಪುಗಳನ್ನು ಒಗೆಯಲು ಬೇಕಾದ ಸೋಪಿನ ತುಂಡೊಂದನ್ನು ದಾಸಿಗೆ ಕೊಡುತ್ತಾಳೆ. ಅವನು ಸ್ನಾನಮಾಡುವ ತೊಟ್ಟಿಗೆ ನೀರನ್ನು ದಿನವೂ ತುಂಬಲು ನೀರು ತರುವವನಿಗೆ ಹೇಳುತ್ತಾಳೆ. ರಾಮನ ದೀಪಕ್ಕೆ ಪ್ರತಿದಿನವೂ ಎಣ್ಣೆಯನ್ನು ಹಾಕಲು ಎಣ್ಣೆಯವನಿಗೆ ಹೇಳುತ್ತಾನೆ. ರಥವು ಹೊರಡುವ ಮುನ್ನ ಹಿಂದಿರುಗಿ ನೋಡುತ್ತಾಳೆ. "ನನ್ನ ರಾಮನ ಉಡುಪುಗಳನ್ನು ಸ್ನಾನದ ಮನೆಯಲ್ಲಿ ಇಟ್ಟಿದ್ದೀರಾ?" ಎಂದು ಕೇಳಿ ಮತ್ತೊಮ್ಮೆ ದೃಢಪಡಿಸಿಕೊಳ್ಳುತ್ತಾಳೆ. ಈ ಹಾಡಿನ ಕೊನೆಯ ಸಾಲುಗಳನ್ನು ನೋಡೋಣ. ಹಾಡುಗಾರಳು ತಮ್ಮ ಗೆಳತಿಯರೆಡೆಗೆ ಕಣ್ಣು ಹಾಯಿಸುತ್ತಾ ಹೇಳುತ್ತಾಳೆ.

"ಸೀತೆ ಕಾಡಿಗೆ ನಡೆದಿದ್ದಾಳೆ
ಅವಳು ನಿನಗೆ-ನನಗೆ ಮಾತ್ರ
ತನ್ನ ಹೃದಯವ ತೆರೆದಿಡುತ್ತಿದ್ದಾಳೆ:
"ರಾಮ ನಿರ್ದಯಿ
ನಾನೈದು ತಿಂಗಳ ಗರ್ಭಿಣಿ."
ಸೀತೆ ಮನೆಯನ್ನು ಬಿಡುತ್ತಿದ್ದಾಳೆ
ಅವಳು ತನ್ನ ದುಃಖವ ನಿನಗೆ-ನನಗೆ ಹಂಚಿಕೊಳ್ಳುತ್ತಿದ್ದಾಳೆ:
"ಇಲ್ಲಿ ಯಾರಿಗೂ ನನ್ನ ಮೇಲೆ ಕನಿಕರವಿಲ್ಲ
ನನ್ನೊಡಲಲ್ಲಿ ಎಳೆಯ ಕಂದನ ಕೊಂಡೊಯ್ಯುತ್ತಿದ್ದೇನೆ".

ಇಲ್ಲಿ ನಿರ್ಮೋಹದ, ವಿಮರ್ಶೆಯ ದನಿಯಿದೆ. ಇದನ್ನು ಮಹಿಳೆಯರು ಮಾತ್ರ ಸೀತೆಯೊಂದಿಗೆ ಅಥವಾ ಸೀತೆಯು ಮಹಿಳೆಯರೊಂದಿಗೆ ಹಂಚಿಕೊಳ್ಳಬಲ್ಲರು.

## ಬಂಗಾರದ ಜಿಂಕೆ : ಪುರುಷ ಜೀವನದ ಮೌಲ್ಯ

ಬಂಗಾರದ ಜಿಂಕೆ ಮತ್ತು ಸೀತಾಪಹರಣದ ಕಥೆಯಲ್ಲಿ ಬಹಳಷ್ಟು ವೈವಿಧ್ಯತೆಯಿದೆ. ಬಂಗಾಳಿಯ ಹಾಡುಗಳಲ್ಲಿ ಕಥೆ ಹೀಗಿದೆ: ನಿರ್ಜನವಾದ ಕಾಡೊಂದರಲ್ಲಿ ತನಗೊಂದು ಸಹಜೀವಿಯನ್ನು ಬಯಸುತ್ತಿದ್ದ ಸೀತೆ ಆ ಸುಂದರ ಪ್ರಾಣಿಯನ್ನು (ಜಿಂಕೆ) ಬಯಸುತ್ತಾಳೆ. ಒಂದು ಮರಾಠಿಯ ಹಾಡಿನಲ್ಲಿ, ಆ ಬಂಗಾರದ ಜಿಂಕೆಯ ಚರ್ಮದಿಂದ ಸಿದ್ಧಪಡಿಸಿದ ಬಂಗಾರದರವಿಕೆಯನ್ನು ಸೀತೆ ಬಯಸುತ್ತಾಳೆ. ಒಂದು 'ಬುಡಕಟ್ಟು ಜನಾಂಗದ ಹಾಡಿನಲ್ಲಿ, ಬಹಳ ವರ್ಷಗಳಿಂದ ಕಾಡಿನ ಹಣ್ಣು ಹಂಪಲು/ಗಡ್ಡೆ ಗೆಣಸುಗಳನ್ನು ತಿಂದು ಬೇಸತ್ತ ಸೀತೆಯು ಬದಲಾವಣೆಗಾಗಿ ಜಿಂಕೆಯ ಮಾಂಸದ ಅಡಿಗೆ ಮಾಡಬಯಸುತ್ತಿದ್ದಳು. ತೆಲುಗು ಹಾಡೊಂದರಲ್ಲಿ ಸೀತೆಯು ಚಿಕ್ಕಗಿಡವೊಂದನ್ನು ಸಾಕುತ್ತಿದ್ದಾಳೆ. ಅದನ್ನು ಜಿಂಕೆಯೊಂದು ದಿನವೂ ಬಂದು ತಿನ್ನುತ್ತದೆ. ಆ ಜಿಂಕೆಯನ್ನು ಹಿಡಿಯುವ ಮೂಲಕ ಆ ಗಿಡವನ್ನು ಉಳಿಸಲು ಬಯಸುತ್ತಾಳೆ. ಕಾರಣವೇನೆ ಇರಲಿ, ತನ್ನ ಗಂಡ ಆ ಜಿಂಕೆಯನ್ನು ಹಿಂಬಾಲಿಸಲೆಂದು ಬಯಸುತ್ತಾಳೆ. ಅನಂತರ ತನ್ನ ಮೈದುನನನ್ನೂ ಕಳುಹಿಸುತ್ತಾಳೆ. ರಾಮನು ಲಕ್ಷ್ಮಣನಿಗೆ ಒಬ್ಬಳನ್ನೇ ಬಿಟ್ಟು ಎಲ್ಲಿಗೂ ಹೋಗದಂತೆ ವಿಶೇಷವಾಗಿ ಉಚ್ಚರಿಸಿರುತ್ತಾನೆ. ಹೀಗೆ ಸೀತೆ ಒಂದಕ್ಕಿಂತ ಹೆಚ್ಚು ಸಾರಿ ಹೆಣ್ಣಿನ ವರ್ತನೆಗೆ ಸಂಬಂಧಿಸಿದ ಕಟ್ಟುಪಾಡುಗಳನ್ನು ಮುರಿಯುತ್ತಾಳೆ. ಮೊದಲ ಬಾರಿಯೆಂದರೆ, ಸ್ವಯಂವರದ ಸಭೆಯಲ್ಲಿ ಸೀತ ರಾವಣನನ್ನು ನೋಡಿ ನಗುತ್ತಾಳೆ; ಅದು ಮಹಿಳೆಯೊಬ್ಬಳಿಗೆ

ತಕ್ಕುದಾದ ವರ್ತನೆಯಲ್ಲ. ಎರಡನೆಯ ಬಾರಿ, ಲಕ್ಷ್ಮಣ ಹಾಕಿದ ಸೀಮಾರೇಖೆಯನ್ನು ಉಲ್ಲಂಘಿಸುತ್ತಾಳೆ. (ವಾಲ್ಮೀಕಿ ರಾಮಾಯಣದಲ್ಲಿ ರಾವಣನ ಪ್ರತಿಜ್ಞೆಯಾಗಲೀ, ಪ್ರಸ್ತುತ ಭಾಗವಾಗಲೀ ಇಲ್ಲ.) ಹೆಚ್ಚಿನ ಹಾಡುಗಳಲ್ಲಿ, ಸೀತೆಯು ಸಾಧುವಿಗೆ ಭಿಕ್ಷೆಯನ್ನು ಕೊಡದಿರುವುದು ಪಾಪಕಾರ್ಯ ಎನ್ನುವ ಕಾರಣಕ್ಕಾಗಿ ಸನ್ಯಾಸಿಭಿಕ್ಷುಕನಿಗೆ ಭಿಕ್ಷೆ ನೀಡಲೆಂದು ಸೀಮಾರೇಖೆಯನ್ನು ದಾಟುತ್ತಾಳೆ. ಬಂಗಾಳಿಯಲ್ಲಿ ಒಂದೇ ಗೆರೆಯಾದರೆ, ತೆಲುಗು ಮತ್ತು ಮರಾಠಿಯಲ್ಲಿ ಮೂರು ಅಥವಾ ಏಳು ರಕ್ಷಣಾ ವೃತ್ತಗಳನ್ನು ದಾಟುತ್ತಾಳೆ. ಮಹಿಳೆಯರು ಬೀಜ ಬಿತ್ತುತ್ತಾ ಹಾಡುವ ತೆಲುಗು ಹಾಡೊಂದರಲ್ಲಿ, ಮಾಯಾ ವೃತ್ತಗಳನ್ನು ದಾಟಿದರೆ ಏನಾಗುತ್ತದೆಂದು ಸೀತೆ ಲಕ್ಷ್ಮಣನನ್ನು ಕೇಳುತ್ತಾಳೆ. ಅದಕ್ಕೆ ಲಕ್ಷ್ಮಣ, 'ನೀವು ಅಪಹರಣಕ್ಕೊಳಗಾಗುತ್ತೀರಿ' ಎಂದನ್ನುತ್ತಾನೆ. ಸಾಧುವೇಷದ ರಾವಣನು ಬಂದು ರಕ್ಷಣಾ ವೃತ್ತಗಳಿಂದ ಹೊರಬರಲು ತಿಳಿಸಿದಾಗ ಇದೇ ಪ್ರಶ್ನೆಯನ್ನು ಸೀತೆ ಅವನಿಗೆ ಕೇಳುತ್ತಾಳೆ. ಆಗ ರಾವಣನು "ನೀನು ಒಂದು ವೃತ್ತವನ್ನು ದಾಟಿದರೆ, ಒಬ್ಬ ಮಗನನ್ನು ಪಡೆಯುತ್ತೀಯೆ; ಎರಡು ವೃತ್ತಗಳನ್ನಾದರೆ, ಇಬ್ಬರನ್ನು ಮೂರು ವೃತ್ತಗಳಾದರೆ, ಮೂವರನ್ನು.......ತನಗೆ ಹೀಗೆ ಸಂವಾದ ಮುಂದುವರಿಯುತ್ತದೆ. ಸೀತೆಯು ತನಗೆ ಸಿಕ್ಕಿದ ಅವಕಾಶವನ್ನು ಬಿಡಲು ಸಿದ್ಧಳಿರಲಿಲ್ಲ. ಆಸೆಬುರುಕತನದಿಂದ ಎಲ್ಲಾ ವೃತ್ತಗಳನ್ನೂ ದಾಟಿಬಿಡುತ್ತಾಳೆ. ಕಾರಣ, ಅವಳಿಗೆ ಗಂಡು ಮಕ್ಕಳು ಬೇಕು. ಆದರೆ ಅಪಹರಣದ ಬಗ್ಗೆಯೂ ಅವಳಿಗೆ ತಿಳಿದಿದೆ. ಇದರಿಂದ ತಿಳಿಯುವುದಾದರೂ ಏನು? ಭಾರತದಲ್ಲಿ ಹೆಂಡತಿಯ ಅಗತ್ಯ ಕರ್ತವ್ಯವೆಂದರೆ 'ಮಗನನ್ನು' ಹೆತ್ತು ಕೊಡುವುದು. ಅದು ಸಾಧ್ಯವಿರದಾಗ ಮಹಿಳೆಯರು ಭಯಂಕರವಾದ ದೈಹಿಕ ಮತ್ತು ಮಾನಸಿಕ ಕಿರುಕುಳವನ್ನು ಅನುಭವಿಸುತ್ತಾರೆ. ಹೆಚ್ಚಿನ ಸಂದರ್ಭಗಳಲ್ಲಿ ಪರಿತ್ಯಕ್ತರಾಗುತ್ತಾರೆ. ಸಾಮಾಜಿಕ ಮತ್ತು ಕೌಟುಂಬಿಕ ಹಿಂಸೆಯಿಂದಾಗಿ ಆತ್ಮಹತ್ಯೆಗಳ ಸಂಖ್ಯೆ ಹೆಚ್ಚುತ್ತದೆ. ಹೆಣ್ಣು ಶಿಶು ಹತ್ಯೆಯ ಸಂಖ್ಯೆ ಎಚ್ಚರಿಕೆಯ ಗಂಟೆಯನ್ನು ಹೊಡೆದಿದೆ. ಇಲ್ಲಿ ಸೀತೆ ಅಂಥ ಅಪಾಯವನ್ನು ಗಂಡು ಮಕ್ಕಳಿಗಾಗಿ ಆಹ್ವಾನಿಸಿದ್ದರೆ ಅಚ್ಚರಿ ಪಡಬೇಕಾಗಿಲ್ಲ.

ಬಂಗಾಳಿ ಮಹಿಳೆಯರ ಹಾಡೊಂದರಲ್ಲಿ ಪರ್ಯಾಯ ಚಿಂತನೆಯೊಂದು ಕಂಡುಬರುತ್ತದೆ. ಸೀತೆಯನ್ನು ಲಕ್ಷ್ಮಣ ರೇಖೆಯನ್ನು ದಾಟುವಂತೆ ರಾವಣನು ಒತ್ತಾಯಿಸುತ್ತಾನೆ. ಹಾಗೆ ದಾಟಿ ಬಂದು ತನಗೆ ಆಹಾರ ಮತ್ತು ನೀರನ್ನು ಕೊಡದಿದ್ದರೆ ಅವಳ ಮನೆಯ ಬಾಗಿಲಲ್ಲೇ ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಯನ್ನು ಹಾಕುತ್ತಾನೆ. "ಪುರುಷ ಹತ್ಯಾ ಮಹಾಪಾಪ" ಎಂಬ ಉಕ್ತಿಯಲ್ಲಿ ನಂಬಿಕೆಯನ್ನಿಟ್ಟಿದ್ದ ಸೀತೆ ಪುರುಷನೊಬ್ಬನ ಜೀವ ಹಾನಿಗೆ ಬೆದರುತ್ತಾಳೆ. ಗಂಡು ಜೀವವನ್ನುಳಿಸಲು ರೇಖೆಗಳನ್ನು ದಾಟಿ ತನ್ನನ್ನು ಅಪಾಯಕ್ಕೊಡ್ಡಿಕೊಳ್ಳುತ್ತಾಳೆ. ಇದರಿಂದ ಪುರುಷ ಜೀವಕ್ಕಿರುವ ಬೆಲೆ ಮತ್ತು ಹೆಣ್ಣು ಜೀವಕ್ಕೆ ಬೆಲೆಯೇ ಇಲ್ಲದಿರುವುದು ತಿಳಿದುಬರುತ್ತದೆ. ಹೆಣ್ಣು ಶಿಶು ಹತ್ಯೆಯ ಆಚರಣೆ ಈ ಮಾತಿಗೆ ಪುಷ್ಟಿ ನೀಡುತ್ತದೆ.

ಒಬ್ಬ ಮಗನಾಗಲೀ ಅಥವಾ ಏಳು ಗಂಡು ಮಕ್ಕಳಾಗಲೀ ಅಥವಾ ಒಬ್ಬ ಭಿಕ್ಷುಕ ಸಾಧುವಾಗಲೀ, ಸೀತೆಯ ಬದುಕಿಗಿಂತ ಗಂಡಿನ ಬದುಕಿನ ಮೌಲ್ಯ ಹೆಚ್ಚು ಎಂದು ಪರಿಗಣಿಸಲಾಗಿದೆ. ಸೀತೆಯ ಲಕ್ಷ್ಮಣ ರೇಖೆಯ ಉಲ್ಲಂಘನೆಗೆ ಹಲವು ಕಾರಣಗಳನ್ನು ಮಹಿಳೆಯರು ಕೊಡುತ್ತಾರೆ. ಆದರೆ ಸಾಮಾನ್ಯ ಅಭಿಪ್ರಾಯ ಅವಳ ವಿರುದ್ಧವಾಗಿದೆ. ಅವಳು ನಡವಳಿಕೆಯ ಕಟ್ಟುಪಾಡುಗಳನ್ನು ಮುರಿದಳು ; ಗಂಡನ ಬುದ್ಧಿವಾದವನ್ನು ಕೇಳದೆ ಜಿಂಕೆಗಾಗಿ ಹಂಬಲಿಸಿದಳು ; ಲಕ್ಷ್ಮಣರೇಖೆಯನ್ನು ದಾಟಿದ್ದಲ್ಲದೆ ಅದಕ್ಕೆ ಮೊದಲು ತನ್ನ (ಅಂಗ) ರಕ್ಷಕನನ್ನು ದೂರಕ್ಕೆ ಕಳುಹಿಸಿದಳು; ಪುರುಷನೊಬ್ಬನ ಕಡೆ ಬಹಿರಂಗವಾಗಿ ನಕ್ಕಳು ; ತನ್ನ ಅಪಹರಣಕ್ಕೆ ಅಗತ್ಯವಾದುದೆಲ್ಲವನ್ನೂ ತಾನೇ ಯೋಜಿಸಿದ್ದಳು.

ಅದೇ ರೀತಿಯಲ್ಲಿ ತನ್ನ ಪರಿತ್ಯಾಗಕ್ಕೂ ಅರ್ಹಳಾಗಿದ್ದಳು. ಅವಳ ಮೇಲೆ ಅತ್ಯಾಚಾರ ನಡೆಯಲಿಲ್ಲ ಎನ್ನುವುದು ಕೇವಲ ತಾಂತ್ರಿಕತೆ ಅಷ್ಟೆ. ಸಮಾಜದ ಕಣ್ಣಲ್ಲಿ ಅವಳು ಗೌರವವನ್ನು ಕಳೆದುಕೊಂಡಿದ್ದಳು.

ಪ್ರಪಂಚದೆಲ್ಲೆಡೆ ಈಗಲೂ ಬಲಿ ಪಶುವನ್ನೇ ಆರೋಪಿಯೆನ್ನಲಾಗುತ್ತದೆ. ಆ ಮೂಲಕ ಅವರಿಗೆ ಎರಡುಪಟ್ಟು ಅನ್ಯಾಯವಾಗುತ್ತದೆ. ಅತ್ಯಾಚಾರಕ್ಕೆ ಬಲಿಯಾದವರು ತಮ್ಮ ಹಕ್ಕುಗಳ ಉಲ್ಲಂಘನೆಯ ನೋವು ಮತ್ತು ಅಪಮಾನಗಳನ್ನಷ್ಟೇ ಅಲ್ಲ, ಸಾಮಾಜಿಕ ಮತ್ತು ಕೌಟುಂಬಿಕ ತಿರಸ್ಕಾರವನ್ನೂ ಅನುಭವಿಸುವಂತಾಗುತ್ತದೆ: ಇಂಥ ಪ್ರಕರಣಗಳು ಆತ್ಮಹತ್ಯೆಗೆ ದಾರಿಮಾಡಿಕೊಡುತ್ತವೆ. ಸೀತೆಯ ಪ್ರಕರಣದಲ್ಲೂ ಇದೇ ಆಗಿದೆ. ಎರಡನೆಯ ಬಾರಿ ಪಾವಿತ್ರ್ಯ ಪರೀಕ್ಷೆಗೊಳಗಾಗಲು ಒತ್ತಡ ಹೇರಿದಾಗ

ಕುಪಿತಳಾದ ಸೀತೆಯು ಭೂಮಿಯಿಂದ ಕಣ್ಮರೆಯಾಗಲು ನಿರ್ಧರಿಸುತ್ತಾಳೆ; ಹಾಗೇ ಮಾಡುತ್ತಾಳೆ.

ಇದು ಒಂಟಿ ಹೆಣ್ಣಿನ ಹೋರಾಟದ ಕಥೆಯಾಗಿದೆ. ಅವಳಿಗೆ ಅತ್ಯಂತ ಹತ್ತಿರದವರೂ ಅವಳ ನೋವಿನ ಅನುಭವದ ಹೊರಗುಳಿಯಲು ಬಯಸುತ್ತಾರೆ. ಅದು ಈ ಮರಾಠಿ ಹಾಡಿನಲ್ಲಿ ವ್ಯಕ್ತವಾಗಿದೆ:

"ಅದನ್ನವರು ಹೇಗೆ ಮಾಡಿದರು?
ರಕ್ತವೇ ಕರಗಿ ಕಣ್ಣೀರಾಗುವುದು.......
ಕಾಡಿನಲಿ ಅತಿ ಧೈರ್ಯದಿ ಹೋರಾಡುತ್ತಿರುವವರು ಯಾರು?
ಒಬ್ಬಂಟಿಯಾಗಿರುವವರು ಯಾರು
ಸೀತೆಯ ಗಡೀಪಾರನ್ನು ಪುಸ್ತಕದಲ್ಲಿ ರಾಮು ಓದುತ್ತಿರುವನು....."

(ಭಾವಾನುವಾದ)

ಸೀತೆಯ ವಾಸ್ತವಕ್ಕೆ ಹೊರತಾದ ರಾಮನ ವಾಸ್ತವ ಜಗತ್ತು ನಮಗೆ ನೇರವಾಗಿ ತಟ್ಟುತ್ತದೆ. ರಾಮನು ಸೀತೆಯ ಕಷ್ಟಗಳಿಂದ ಸಂಪೂರ್ಣವಾಗಿ ನಿರ್ಲಿಪ್ತನಾಗಿದ್ದಾನೆ. ಅದರ ಬಗ್ಗೆ ಪುಸ್ತಕವೊಂದರಲ್ಲಿ ಓದುತ್ತಾನೆ. ಮಹಿಳೆಯರು 'ರಾಮಾಯಣ'ವನ್ನು ಹಾಡುವಾಗ ರಾಮನು ಪುಸ್ತಕದ ಭಾಗವಾಗಿಲ್ಲ; ಅದರ ಹೊರಗಿರುತ್ತಾನೆ.

### ಗಡೀಪಾರಾದಾಗ ಶಿಶುಜನ

ಮರಾಠಿ ಮತ್ತು ತೆಲುಗು ಭಾಷೆಗಳ ಗಡೀಪಾರಿನ ಹಾಡುಗಳು ಮಹಿಳೆಯರ ಮನಕಲಕುವಂತಿವೆ. ಮೈಥಿಲಿ ಭಾಷೆಯ ಹಾಡುಗಳಲ್ಲಿ ಗಡೀಪಾರನ್ನು ಶಿಶುಜನನದ ಹಾಡುಗಳ ಭಾಗವಾಗಿಸಲಾಗಿದೆ. ಇಲ್ಲಿ ನೋಡಿ:

"ಸೀತೆ ಅರಮನೆಯ ತೊರೆಯುತ್ತಾಳೆ
ಬಂಗಾರದ ಬಾಗಿಲ ತೆರೆಯುತ್ತಾಳೆ
ಗಡೀಪಾರಾಗಿ ಕಾಡಿಗೆ ನಡೆಯುತ್ತಾಳೆ.
ಎಲೆ ಹೆಣ್ಣುಗಳೆ, ಗಡೀಪಾರಾಗುವುದು ಸೀತೆಯ ವಿಧಿ
ಒಂದು, ಎರಡು......ಮೈಲಿ ದೂರ ನಡೆಯುತ್ತಾಳೆ.
ಮತ್ತಷ್ಟು ದೂರ ನಡೆಯುತ್ತಾಳೆ, ನೋವು ಕಾಣುತ್ತದೆ.
ಜೀವಕೆ ಹುಟ್ಟುವ ಬಯಕೆ, ಹುಡುಗಿಯರೆ,
ಬೇಗ ಕರೆಯಿರಿ, ನರ್ಸಮ್ಮನನ್ನು!
ಮರವು ಕಾಡಿನ ಹೊರಬಂತು
ನೀ ಗೆಳೆಯನೆ? ಹಿತೈಷಿಯೆ?
ತಗೊ ನನ್ನ ಬಂಗಾರದ ಬಳೆ
ಕತ್ತರಿಸು ಶಿಶುವಿನ ಹೊಕ್ಕುಳ ಬಳ್ಳಿ......
ಅಯ್ಯೋ! ರಾಮನಿದನರಿತಿದ್ದರೆ!

(ಭಾವಾನುವಾದ)

ಈ ಭಾಗ ಒಬ್ಬ ಗರ್ಭಿಣಿಯ ಭಯಂಕರವಾದ ಒಂಟಿತನವನ್ನು ಹೇಳುತ್ತದೆ. ಸುರಕ್ಷಿತವಾದ ಮನೆಯಿಂದ ಹೊರಹಾಕಲ್ಪಟ್ಟ ಅವಳ ದುಃಖದ ಕ್ಷಣಗಳಲ್ಲಿ ನೆರವಾಗುವವರು ಯಾರೂ ಇಲ್ಲ. ನಿರ್ಜನವಾದ ಕಾಡಿನಲ್ಲಿ ಒಂಟಿಯಾಗಿ ಪ್ರಸವಿಸುವ ಮಹಿಳೆಯ ಒಂಟಿತನ ಮಹಿಳಾ ರಾಮಾಯಣಗಳನ್ನು ಕಾಡುತ್ತದೆ. ಮರಾಠಿಯ ಈ ಹಾಡನ್ನು ನೋಡಿ:

"ಈ ದಟ್ಟಾರಣ್ಯದಲಿ ಹೊಗೆಯಾಡುತಿದೆಯೆಲ್ಲಿ?
ಈ ದಟ್ಟಾರಣ್ಯದಿ ಪ್ರಸವಿಸಿದ್ದಾಳೆ ಸೀತಾಬಾಯಿ.
ನೀರನ್ನು ಕಾಯಿಸಿದೆ.
ಪ್ರಸವಿಸಿದ್ದಾಳೆ ಸೀತಾಬಾಯಿ.
ಎಲ್ಲಿದೆ ಹಾಸಿಗೆ ಸೀತಾಬಾಯಿಗೆ?
ಕಪ್ಪು ಚೆಲುವೆ ಸೀತಾಬಾಯಿ
ಹಾಸಿ ಬಂಡೆಗಲ್ಲುಗಳ ಹಾಸಿಗೆ
ಪ್ರಸವಿಸಿದ್ದಾಳೆ ಸೀತಾಬಾಯಿ.
ಎಲ್ಲಿದೆ ಆಹಾರ ಸೀತೆಗೆ?
ಮಾಡುವರಿಲ್ಲ ಅಡಿಗೆ ಅವಳಿಗೆ.
ಗಡೀಪಾರಾಗಿರುವಳು ಸೀತೆ
ತೊಟ್ಟಿಲುಗಳಿಲ್ಲ ಮಕ್ಕಳಿಗೆ
ಹೂವ ಹಾಸಿಗೆಯ ಹಾಸಿದಳು ಸೀತೆ
ಇಟ್ಟಳು ತನ್ನವಳಿ ಮಕ್ಕಳದರ ಮೇಲೆ
ಪ್ರಸವಿಸಿದ್ದಾಳೆ ಸೀತಾಬಾಯಿ
ಸಂತಸಪಡುತಿವೆ ಬೆಟ್ಟಕಾಡುಗಳು
ಅವಳಿಗಿಲ್ಲ ತನ್ನವರೆನ್ನುವವರು
ತಿರಸ್ಕಾರದ ಬದುಕ ಬದುಕಿರುವೆ
ಹೇಳುವಳು ಸೀತೆ
ಬದುಕಿನುದ್ದಕೂ ಕಡೆಗಣಿಸಿದ ರಾಮ
ಹೌದು, ಅವಳ ಬದುಕಿನುದ್ದಕೂ,

(ಭಾವಾನುವಾದ)

ಇದು ಮಹಿಳೆಯರು ರಾಮಾಯಣವನ್ನು ಹಾಡುವ ಪರಿ.

ಗ್ರಾಮೀಣ ಭಾರತದ ಮಹಿಳೆಯರು, ಆಶ್ರಯ, ನೆರವು, ಸೌಲಭ್ಯ, ಆರೋಗ್ಯಕರ ಪರಿಸರ ಇವ್ಯಾವುವೂ ಇರದ ಕೆಟ್ಟ ಪರಿಸ್ಥಿತಿಯಲ್ಲಿ ಮಕ್ಕಳನ್ನು ಹೆರುತ್ತಾರೆ. ಇವೆಲ್ಲವೂ ಸೀತೆಯ ಹೆರಿಗೆಯ ಹಾಡುಗಳಲ್ಲಿ ಬಿಂಬಿತವಾಗಿವೆ. ತೆಲುಗು, ಮರಾಠಿ ಮತ್ತು ಮೈಥಿಲಿ ಭಾಷೆಗಳ ಹಾಡುಗಳಲ್ಲಿ ಆರೈಕೆ ಮಾಡುವ ಕುರುಹೆಂದರೆ, ನೀರನ್ನು ಕಾಯಿಸುವುದು. ಶಿಶುಮರಣ, ಹೆರಿಗೆಯಲ್ಲಿ ತಾಯಂದಿರ ಮರಣಸಂಖ್ಯೆ ಭಾರತದಲ್ಲಿ ಇಂದಿಗೂ ಹೆಚ್ಚಿನ ಸಂಖ್ಯೆಯಲ್ಲಿದೆ. ಶೇ.67 ಮಂದಿ ಗರ್ಭಿಣಿ ಮಹಿಳೆಯರು ವೈದ್ಯರು ಮತ್ತು ದಾದಿಯರ ಸಹಾಯವಿಲ್ಲದೆ ಪ್ರಸವಿಸುತ್ತಾರೆ; ಅಲ್ಲದೆ ಪ್ರಸವೋತ್ತರ ಆರೈಕೆ ಕೂಡ ಅತಿಕಡಿಮೆ ಇರುತ್ತದೆ. ಒಂದು ಲಕ್ಷ ಮಕ್ಕಳ ಜನನಕ್ಕೆ 570 ತಾಯಂದಿರು ಮರಣ ಹೊಂದುತ್ತಾರೆ ಎಂದು ಅಂಕಿ ಅಂಶಗಳು ಹೇಳುತ್ತವೆ. ಹಾಗಿದ್ದಲ್ಲಿ, ಈ ಗ್ರಾಮೀಣ ಮಹಿಳೆಯರು ಒಬ್ಬಂಟಿಯಾಗಿ ಮಗುವನ್ನು ಹೆರುವ ಸಂದರ್ಭದ ನೋವು ಮತ್ತು ಭಯಗಳ ಬಗೆಗೆ ಹಾಡಿದರೆ ಅದು ಅವರ ಬದುಕಿನ ಪ್ರತಿಬಿಂಬವೆ?

ಮಹಿಳೆಯರು ತಾಯಿಯ ಆರೈಕೆಯಲ್ಲಿನ ಕೊರತೆಯ ಬಗೆಗೂ ಹಾಡುತ್ತಾರೆ. ಸೀತೆ ಅವರ ದನಿಯಾಗುತ್ತಾಳೆ.

"ಹನ್ನೆರಡು ವರುಷಗಳ ಆರಣ್ಯವಾಸದಲಿ
ತಿನ್ನಲೇ ಬೇಕೇನನಾದರೂ ಸೀತಾಬಾಯಿ
ಅರಸುವಳು ಅರಣ್ಯದಿ ಗಡ್ಡೆ ಗೆಣಸುಗಳ
ಸಿಗಲಿಲ್ಲ ವೇನೂ ಸೀತೆಗೆ ಐದು ದಿನಗಳ ಕಾಲ"
(ಮರಾಠಿ)

ಟಾನಿಕ್ ಕೊಡಲು, ಬಾಣಂತಿಯ ವಿಶೇಷ ಆಹಾರವನ್ನು
ತಯಾರಿಸಲು ಯಾರೂ ಇಲ್ಲ.
"ನೀಡಿದ ರಾಮ ಗಡೀಪಾರಿನ ಕೊಡುಗೆ
ಅನಿರೀಕ್ಷಿತ ಬಿರುಗಾಳಿಯಾಯಿತೆನಗೆ"

**(ಮರಾಠಿ) (ಭಾವಾನುವಾದ)**

ಸೀತೆಯು ಮರಗಿಡಗಳಿಗೆ, ಪಕ್ಷಿಗಳಿಗೆ ದೂರುತ್ತಾಳೆ. ಕೊನೆಗೆ ರಾಮನ ರಾಜ್ಯದ ಬಗ್ಗೆ ಕೇಳುತ್ತಾಳೆ. "ನನ್ನ ರಾಮ ಈಗ ಎಲ್ಲಿ ಆಳುತ್ತಿದ್ದಾನೆ?" ಎಂಬ ಸೀತೆಯ ಸೂಕ್ಷ್ಮವಾದ ಪ್ರಶ್ನೆಯಲ್ಲಿ ರಾಮನ ನ್ಯಾಯ, ಅನ್ಯಾಯಗಳ ಪ್ರಜ್ಞೆ, ಸಾಮಾಜಿಕ ಮತ್ತು ಕೌಟುಂಬಿಕ ಜವಾಬ್ದಾರಿಗಳು ಅಕ್ಕಪಕ್ಕದಲ್ಲಿರುವುದನ್ನು ಕಾಣಬಹುದು. "ರಾಮ, ನನಗೆ ಹೀಗೆ ಮಾಡಲು ನಿನಗೆ ಹೇಗೆ ಸಾಧ್ಯವಾಯಿತು?" ಎಂದು ಇನ್ನೊಂದು ವಾಕ್ಯದಲ್ಲಿ ಕೇಳುತ್ತಾಳೆ. ಅವಳ ಪ್ರಶ್ನೆಗೆ ಉತ್ತರ ಕಪ್ಪು ಹಣ್ಣಿನ ಪೊದೆಯೊಂದರ ಬಳಿಯಿದೆ ಇನ್ನೊಂದು ಮರಾಠಿ ಹಾಡಿನಲ್ಲಿ

"ಗರ್ಭಿಣಿ ಸೀತೆಗೀಗ ಒಂಬತ್ತು ತಿಂಗಳು ; ಗಡೀಪಾರಾದವಳು
ಅವಳು ಹೆಣ್ಣು.
ತಿರಸ್ಕಾರ- ವಂಚನೆಯಳನೆದುರಿಸಬೇಕಿತ್ತು
ಅಪಾರನೋವನನುಭವಿಸಬೇಕಿತ್ತು.
ಸೀತೆ ಒಬ್ಬ ಹೆಣ್ಣು
ಅನಾಗರಿಕರ ಸೊಲ್ಲಿಗೆ ಕಿವಿಗೊಟ್ಟು ರಾಮ.
ಗುಣವತಿ ಸೀತೆಯ ಕಾಡಿಗಟ್ಟಿರುವೆ!

ಪ್ರಕೃತಿಯ ಕೂಸಾದ ಸೀತೆಗೆ ಕಾಡಿನ ಜೀವಜಂತುಗಳ ಸಹಾನುಭೂತಿ ಇದೆ. ಬಂಗಾಳಿಯಲ್ಲೂ ಕೂಡ ಗಡೀಪಾರಿನ ಹಾಡುಗಳು ಹೃದಯ ತಟ್ಟುವಂತಿವೆ. ಭಾಷೆ ಮಾತ್ರ ಮೃದುವಾಗಿಲ್ಲ ಎನ್ನಬಹುದು. ಬಂಗಾಳಿ ಮಹಿಳೆಯರು ರಾಮನಿಗೆ ಕಠಿಣ ಶಬ್ದಗಳನ್ನು ಬಳಸುತ್ತಾರೆ.

"ಪಂಚಮಶೆರ್ ಗಭಾ ಸಿತರ್ ಛಿಲೊ ರಾಜ್‌ಧಾಮೆ
ಪಾಷಂಡ ಹೊಯಾರಾಮ್ ಸೀತಾ ದಿಲೊಬನೆ!"

(ಐದು ತಿಂಗಳ ಗರ್ಭಿಣಿಯಾದ ಸೀತೆ ಅರಮನೆಯಲ್ಲಿದ್ದಳು. ಅವಳನ್ನು ಹೃದಯ ಹೀನನಾದ ರಾಮನು ಕಾಡಿಗಟ್ಟಿದ!). ಇನ್ನೊಂದು ಹಾಡಿನಲ್ಲಿ, ಕಾಲಕೂಡುವ ಮೊದಲೇ ಚಿನ್ನದ ಪುತ್ಥಳಿಯನ್ನು ಮುಳುಗಿಸಿದಂತೆ ಸೀತೆ ಗಡೀಪಾರಾದಳು ಎನ್ನಲಾಗಿದೆ.

'ಕಿಚ್ಚು ಕಿಚ್ಚು ಜಾಯೆರೆ ಸೀತಾ
ಪಿಚ್ಚು ಪಿಚ್ಚು ಚಯ್
ತಥಾಪಿ ಪಾಪಿಷ್ಠಿ ರಾಮೇರ್
ಪುರಿ ದೇಖಾ ಜಾಯೆರೆ ಪುರಿ ದೇಖಾ ಜಾಯ್'

(ಸೀತೆ ಕೆಲವು ಹೆಜ್ಜೆಗಳನ್ನಿಡುತ್ತಾಳೆ; ಮತ್ತೆ ಕೆಲವು ಬಾರಿ ಹಿಂದಿರುಗಿ ನೋಡುತ್ತಾಳೆ. ಆದರೇನು! ಆ ಪಾಪಿಷ್ಠ ರಾಮನ ಅರಮನೆ ಮತ್ತಷ್ಟು ಎತ್ತರಕ್ಕೇರುತ್ತದೆ......) 'ಕರುಣಾಸಿಂಧು' ಅಥವಾ 'ದಯಾಸಾಗರ' ಎಂದು ಹೆಸರಾದವನನ್ನು 'ಪಾಪಿಷ್ಠಿ' ಎಂದು ಕರೆಯುವಾಗಿನ ಸಿಟ್ಟಿನ

ಪ್ರಮಾಣ ಎಷ್ಟೆನ್ನುವುದನ್ನು ಇಲ್ಲಿ ಊಹಿಸಿಕೊಳ್ಳ ಬೇಕಾಗಿದೆ. ತಾನೊಬ್ಬ ಪಾಪಿಯಾಗಿ, ಪಾಪಿಗಳನ್ನು ವಿಮುಕ್ತರನ್ನಾಗಿಸುವ 'ಪತಿತ ಪಾವನ' ರಾಮ ಹೇಗಾದಾನು ಎನ್ನುವ ವಿಷಯ ಚರ್ಚಾರ್ಹವಾಗುತ್ತದೆ.

## ಗುರುತು / ಅಸ್ತಿತ್ವ

ಮರಾಠಿ ಹಾಡಿನಲ್ಲೂ ಸೀತೆಯು ಮುಂದಕ್ಕೆ ಹೆಜ್ಜೆಗಳನ್ನಿಡುತ್ತಾ ಪ್ರತಿ ಹೆಜ್ಜೆಗೂ ಹಿಂದಿರುಗಿ ನೋಡುತ್ತಾಳೆ. ತಾನು ಬಿಟ್ಟು ಹೋಗುತ್ತಿರುವ ವಸ್ತುಗಳಿಗಾಗಿ ಲಕ್ಷ್ಮಣನನ್ನು ತಡೆಯುತ್ತಲೇ ಇರುತ್ತಾಳೆ. 'ತಡಿ! ಅವಳ ರವಿಕೆ ರಾಮನ ಹಾಸಿಗೆಯ ಮೇಲಿದೆ. ಮತ್ತೆ ಅವಳ ಸೀರೆಯೂ ಅಲ್ಲಿದೆ: ಸಿಂಧೂರದ ಡಬ್ಬಿಯೂ ಇದೆ. ಕೊನೆಯದಾಗಿ ಹೇಳುತ್ತಾಳೆ: 'ನಾನು ನನ್ನ ಮುಖವನ್ನು ರಾಮನ ಹಾಸಿಗೆಯಲ್ಲಿ ಮರೆತಿದ್ದೇನೆ. ಇಲ್ಲಿ 'ಮುಖದ' ಒಳಾರ್ಥ ಕನ್ನಡಿ ಆಗಿರಬಹುದು. ನಿಜವಾಗಿಯೂ ಅವಳು ತನ್ನ ಗುರುತನ್ನು ಬಿಟ್ಟುಹೋಗಿದ್ದಾಳೆ. ಭಾರತೀಯ ಸಮಾಜದಲ್ಲಿ ಇಂದಿಗೂ ಕೂಡ ಪತ್ನಿಯನ್ನು ಪತಿಯಿಂದಲೇ ಗುರುತಿಸಲಾಗುತ್ತದೆ. ಅವಳನ್ನು ಅವನು ಹೊರಹಾಕಿದಾಗ ಅವಳಿಗದು ಅಸ್ತಿತ್ವದ ಪ್ರಶ್ನೆಯಾಗಿ ಕಾಡುತ್ತದೆ.

ಹೆಣ್ಣನ್ನು ಅವಳ ಗಂಡನಿಂದ ಗುರುತಿಸಲಾಗು-ತ್ತದೆನ್ನುವುದನ್ನು ತೆಲುಗು ಹಾಡೊಂದರಲ್ಲಿ ಸುಂದರವಾಗಿ ಹೇಳಲಾಗಿದೆ : ಸೀತೆ ರಾಮನ ಮಲಗುವ ಕೋಣೆಗೆ ಹೋಗುತ್ತಾಳೆ. ಅಲ್ಲೊಬ್ಬ ಸುಂದರ ಹುಡುಗಿಯನ್ನು ಕಾಣುತ್ತಾಳೆ. ಅವಳಿಗೆ ದಿಗ್ಭ್ರಮೆಯಾಗುತ್ತದೆ, ನೋವಾಗುತ್ತದೆ, ರಾಮನಿಗೆ ದೂರುತ್ತಾಳೆ. ಅವನು ಹತ್ತಿರ ಬರುತ್ತಾನೆ; ಅವಳನ್ನು ಆಲಿಂಗಿಸಿಕೊಳ್ಳುತ್ತಾಳೆ. ಆ ಸುಂದರ ಹೆಣ್ಣು ಈಗ ರಾಮನು ಅಪ್ಪುಗೆಯಲ್ಲಿದ್ದಾಳೆ. ಅವಳು ತಾನೇ ಎನ್ನುವುದನ್ನು ಕನ್ನಡಿಯಲ್ಲಿ ಗುರುತಿಸಿಕೊಳ್ಳುತ್ತಾಳೆ. ರಾಮನು ಅವಳಿಗೆ ಗುರುತನ್ನು ನೀಡುತ್ತಾನೆ. ಅಲ್ಲಿಯವರೆಗೆ ಸೀತೆ ಗುರುತು ಇಲ್ಲದ ಹೆಣ್ಣಾಗಿರುತ್ತಾಳೆ. ಈಗ ಗಡೀಪಾರಾಗುವುದೆಂದರೆ ತನ್ನ ಪಡೆದುಕೊಂಡ ಗುರುತನ್ನು ಕಳೆದುಕೊಳ್ಳುವುದೆಂದೇ ಅರ್ಥ. ತಬ್ಬಲಿತನ ಮಾತ್ರ ಅವಳೊಂದಿಗೆ ಉಳಿದುಕೊಳ್ಳುತ್ತದೆ. ಮಹಾಭಾರತದಿಂದ ಮಾಬಿಡಿಕ್ ವರೆಗೆ ಗಡೀಪಾರು ಮಾಡುವ ಕ್ರಿಯೆ ಎಂದರೆ ವ್ಯಕ್ತಿಯೊಬ್ಬನನ್ನು ಹಕ್ಕುಗಳಿಂದ ವಂಚಿಸುವ ಮತ್ತು ಸಮಾಜದಿಂದ ಪ್ರತ್ಯೇಕಿಸುವ, ದುರ್ಬಲಗೊಳಿಸುವ ಸಂಕೇತವಾಗಿದೆ.

ಕಾಡು ಸಮಾಜಕ್ಕೆ ವಿರುದ್ಧವಾದುದು. ಗಡೀಪಾರು ಎಂದರೆ ಎಲ್ಲಾ ಸಾಮಾಜಿಕ ಸಂಬಂಧಗಳ ವಿನಾಶ ಎಂದಾಗುತ್ತದೆ. ಸೀತೆಯ ಪರಿಸ್ಥಿತಿ ಮಹಿಳೆಯರ ಸ್ಥಾನಮಾನದ ನಶ್ವರತೆಯನ್ನು ತೋರಿಸುತ್ತದೆ. ಗಡೀಪಾರು ಮತ್ತು ಪರಿತ್ಯಾಗಗಳು ಒಂದೇ ಅಲ್ಲ ಗಡೀಪಾರಾದ ಸಂದರ್ಭದಲ್ಲಿ ವೀರತ್ವ ಮತ್ತು ಘನತೆ ಗೌರವಗಳು ಪುರುಷನ ಅನುಭವವಾಗಲು ಸಾಧ್ಯ. ರಾಮನು ಸ್ವತಃ ಗಡೀಪಾರಾದವನು; ಆದರೆ ಪರಿತ್ಯಕ್ತನಲ್ಲ. ಆದರೆ ಸೀತೆಗೆ ಗಡಿ ಪಾರೆಂದರೆ, ಪರಿತ್ಯಕ್ತೆ, ತಿರಸ್ಕೃತಳು, ಮನೆಯಿಂದ ಎಂದೆಂದಿಗೂ ಹೊರಹಾಕಲ್ಪಟ್ಟವಳು. ಅದು ಅಪಮಾನಕರ, ವಂಚಿತತೆ. ಅದು ದುರ್ಬಲರಿಗೆ ಮಾತ್ರ ಆಗುವ ಅನುಭವ. ಪರಿತ್ಯಕ್ತ ಹೆಂಡತಿಯರನ್ನು ಕಾಣುತ್ತೇವೆ. ಆದರೆ ಪರಿತ್ಯಕ್ತ ಗಂಡಂದಿರು? ಗಂಡಿನ ಗುರುತು ತನ್ನಲ್ಲೇ ಇರುತ್ತದೆ. ಆದರೆ ಹೆಣ್ಣಿನ ಗುರುತು ಗಂಡನಲ್ಲಿರುತ್ತದೆ. ಅವಳು ಪರಿತ್ಯಕ್ತಳಾದರೆ ಅವಳ ಗುರುತನ್ನು ಕಿತ್ತುಕೊಳ್ಳಲಾಗುತ್ತದೆ.

ಅದು ಎಲ್ಲಾ ಮಹಿಳೆಯರು ಅನುಭವಿಸುವ ಅಪಮಾನ.

"ಸೀತೆಯ ಗಡೀಪಾರು
ನಮ್ಮ ನಮ್ಮಲ್ಲೇ ಹಂಚುವಾ
ಸೀತೆಯ ಗಡೀಪಾರು
ಅದೆಷ್ಟು ಬಾರಿ?
ಸೀತೆಯ ಗಡೀಪಾರು
ಪ್ರತಿಕ್ಷಣ ಎಲ್ಲೆಲ್ಲೂ
ತೆರಳಿದಳು ಸೀತೆ ಕಾಡಿಗೆ
ತುಸುತುಸುವಾಗಿ ಹಂಚಿದಳುದನು
ನಮ್ಮೆಲ್ಲರಿಗೆ"

ಈ ಮರಾಠಿ/ಹಾಡಿನಲ್ಲಿ ಮಹಿಳೆಯರು ಸೀತೆಯನ್ನು ಹೆಣ್ತನದಿಂದ ಪ್ರತ್ಯೇಕಿಸಲಾಗದ ಕಷ್ಟಗಳ ಸಂಕೇತವನ್ನಾಗಿ ಕಾಣುತ್ತಾರೆ... ಸೀತೆ ಒಬ್ಬ ಸಾರ್ವತ್ರಿಕ ಮಹಿಳೆಯಾಗಿದ್ದು ಅವಳನ್ನು ಕುರಿತ ಹಾಡುಗಳ ಮೂಲಕ ತಮ್ಮ ದೇಜೀವನದ ಕಟುವಾಸ್ತವವನ್ನು ಚಿತ್ರಿಸುತ್ತಾರೆ. (ಸೀತೇಚ ದುಃಖ ಬಾಯೆನ್ ತುಮ್ಹಿ ಬಾತುನ್ ಘಿಯ)

## ಉತ್ತಮ ಗೃಹಿಣಿ

ಈ ಪ್ರದೇಶದ ಮೂಕರಾದ ಮಹಿಳೆಯರಿಗೆ ಸೀತೆ ದನಿಯನ್ನು ನೀಡಿದ್ದಾಳೆ. ಇವಳ ಮೂಲಕ ಅವರು ತಮ್ಮ

ಭಯ, ದುಃಖ, ಭರವಸೆ ಮತ್ತು ಆಕಾಂಕ್ಷೆಗಳನ್ನು ವ್ಯಕ್ತಪಡಿಸುತ್ತಾರೆ. ಸೀತೆಯೊಬ್ಬ ಕಷ್ಟಪಟ್ಟು ದುಡಿಯುವ, ಗಂಡನ ಮನೆಯವರಿಂದ ಕಿರುಕುಳವನ್ನನುಭವಿಸುವ, ಗಂಡನಿಂದ ಕಡೆಗಣಿಸಲಾದ ಆಶ್ರಯದಾತರಿಲ್ಲದ, ತನ್ನ ತಪ್ಪಿಲ್ಲದೆ ಶಿಕ್ಷೆಗೊಳಗಾಗುವ, ಆದರೆ ಕೊನೆಯವರೆಗೂ ಒಳ್ಳೆಯ ಗೃಹಿಣಿಯಾಗಿ ಉಳಿಯುವ ಹೆಣ್ಣು. ತೆಲುಗು ಹಾಡೊಂದರಲ್ಲಿ ಕಥೆ ಹೀಗಿದೆ: ಯುದ್ಧ ಮುಗಿದಿದೆ. ರಾವಣ ಸತ್ತಿದ್ದಾನೆ. ಸೀತೆಯನ್ನು ರಕ್ಷಿಸಲಾಗಿದೆ. ರಾಮನ ಬಳಿಗೆ ಅವಳನ್ನು ಕರೆತರಲಾಗಿದೆ. ದಾರಿಯಲ್ಲಿ ನೆಲದ ಮಣ್ಣಿನಲ್ಲಿ ಅರ್ಧದಷ್ಟು ಹೂತುಹೋದ ಕಲ್ಲೊಂದನ್ನು ಸೀತೆಯು ಹನುಮನಿಗೆ ತೋರಿಸಿ ನಾಚಿಕೆಯಿಂದ ಹೇಳುತ್ತಾಳೆ : 'ಆ ಕಲ್ಲು ರುಬ್ಬಲು ಎಷ್ಟು ಚೆನ್ನಾಗಿರುತ್ತದೆ ! ನಾನದನ್ನು ಅಯೋಧ್ಯೆಗೆ ತೆಗೆದುಕೊಂಡು ಹೋಗಬಯಸುತ್ತೇನೆ.' ಇದನ್ನು ಕೇಳಿದ ಹನುಮ ಅದನ್ನು ನೆಲದಿಂದ ಕೀಳತೊಡಗುತ್ತಾನೆ. ಅದನ್ನು ಕಂಡ ಜಾಂಬವ ಅಂಥ ಆಸೆ ರಾಣಿಯ ಘನತೆಗೆ ತಕ್ಕುದಲ್ಲವೆನ್ನುವ ಕಾರಣಕ್ಕಾಗಿ ಕಲ್ಲನ್ನು ಕೀಳುವುದನ್ನು ತಡೆಯುತ್ತಾನೆ. ಗಲಿಬಿಲಿಗೊಂಡ ಸೀತೆ ನಾಚಿಕೆಯಿಂದ ತಲೆತಗ್ಗಿಸುತ್ತಾಳೆ. ಈ ಹಾಡನ್ನು ಹೇಳುತ್ತಾ ಮಹಿಳೆಯರು ತಮ್ಮತಮ್ಮಲ್ಲೇ ನಗುತ್ತಾರೆ

ಗೃಹ ಬಳಕೆಯ ವಸ್ತುಗಳಿಗೆ ಆಸೆ ಪಡುವುದಾಗಲೀ ಒಬ್ಬಂಟಿಯಾಗಿ ಪ್ರಸವಿಸಬೇಕಾದಾಗ, ಆರೈಕೆ ಮಾಡುವವರಿಲ್ಲದಾಗ ಆಗುವ ಭಯ-ದುಃಖಗಳೇ ಆಗಲಿ, ಮಹಿಳೆಯರ ಹಾಡುಗಳಲ್ಲಿ ಪ್ರಾಮಾಣಿಕ ಕಾಳಜಿಗಳು ಕಂಡುಬರುತ್ತವೆ.

ಭಾರತದ ಒಬ್ಬ ಆದರ್ಶ ಮತ್ತು ಪೌರಾಣಿಕ ಮಹಿಳೆಯಾಗಿ ಸೀತೆ ಏಕೆ ಇಷ್ಟವಾದ ಪಾತ್ರವಾಗುತ್ತಾಳೆನ್ನುವುದನ್ನು ನಾವಿಲ್ಲ ಅರ್ಥ ಮಾಡಿಕೊಳ್ಳಬಹುದು. ಸೀತೆಯು ತನ್ನ ಘನತೆವೈಭವಗಳನ್ನು ಕೂಡ ಕಷ್ಟಗಳಿಗಾಗಿ ಬಿಟ್ಟುಕೊಟ್ಟಿದ್ದಾಳೆ. ಅಂತೆಯೇ ಮಹಿಳೆಯರು ತಮಗೆ ಕಷ್ಟಗಳಿಂದ ಬಿಡುಗಡೆಯಿಲ್ಲವೆಂದು ತಿಳಿದಾಗ, ಅವುಗಳನ್ನು ಗೌರವದಿಂದ ಆಯ್ಕೆ ಮಾಡಿಕೊಳ್ಳುತ್ತಾರೆ. ಸೀತೆಯು ಅದಕ್ಕೆ ನೆರವಾಗುತ್ತಾಳೆ. ಯಾವುದೇ ಸೇಡಿನ ಭಾವನೆಯಿಲ್ಲದೆ ಕಷ್ಟವನ್ನು ವೈಭವದಿಂದ ಅನುಭವಿಸುವ ಬಲಿಪಶುವಾಗಿದ್ದಾಳೆ. ತಾನೆಂದೂ ಬಲಿತೆಗೆದುಕೊಳ್ಳುವವಳಾಗುವುದಿಲ್ಲ. ಸಾಮಾನ್ಯವಾಗಿ ಮಹಾಕಾವ್ಯಗಳಲ್ಲಿ ಬಲಿಯಾಗುವವರು ಬಲಿ ತೆಗೆದುಕೊಳ್ಳುವವರಾಗಿ ಬದಲಾಗುತ್ತಾರೆ ; ಬಲಿ ತೆಗೆದುಕೊಳ್ಳುವವರು ಬಲಿಯಾಗುವವರಂತೆ ಕಾಣುತ್ತಾರೆ. ಮಹಿಳೆಯೊಬ್ಬಳು ಬಲಿಪಶುವಿನ ಸ್ಥಾನದಿಂದ ಬಲಿಕೇಳುವವಳಾಗಿ ಬದಲಾಗುತ್ತಿದ್ದಂತೆ ಕೋಪ ಅಥವಾ ಪ್ರತೀಕಾರದಿಂದಾಗಿ ಅವಳು ಜಯಗಳಿಸುವುದಿಲ್ಲ. ಒಂದು ವೇಳೆ ಜಯಗಳಿಸಿದರೂ ಅದು ಒಟ್ಟಾರೆ ಅನಾಹುತಕ್ಕೆ ದಾರಿಮಾಡಿಕೊಡುತ್ತದೆ. ಬಲಿಯಾಗುವವರು ಬೆದರಿಕೆ -ಯನ್ನೊಡ್ಡುವುದಿಲ್ಲ. ಬಲಿಪಶುವಾದ ದ್ರೌಪದಿಯು ಕೋಪದಿಂದ ತನ್ನ ಐವರು ಗಂಡಂದಿರನ್ನು ತನಗಾದ ಅಪಮಾನಕ್ಕೆ ಪ್ರತೀಕಾರ ಮಾಡಲು ಒತ್ತಾಯಿಸುತ್ತಾಳೆ. ಯುದ್ಧದಲ್ಲಿ ಗೆದ್ದರೂ ತನ್ನ ಐವರು ಗಂಡು ಮಕ್ಕಳನ್ನು ಕಳೆದು ಕೊಳ್ಳುತ್ತಾಳೆ. ಆದರೆ ಸೀತೆಯ ಬಲಿಪಶುವಾಗಿಯೇ ಉಳಿಯುತ್ತಾಳೆ. ಅವಳ ಗಂಡು ಮಕ್ಕಳು ವೀರರಾಗಿ ಬಾಳುತ್ತಾರೆ.

ದ್ರೌಪದಿಯು ಒಂದು ಆದರ್ಶ ಪಾತ್ರವಾಗುವುದು ದುರ್ಬಲ ಮತ್ತು ಶೋಷಿತ ವರ್ಗಕ್ಕೆ ಹೆಚ್ಚು ನಾಟಕೀಯವೆನಿಸುತ್ತದೆ. ಐವರು ಗಂಡಂದಿರು ಮತ್ತು ಸ್ನೇಹಿತನಾಗಿ ಕೃಷ್ಣನನ್ನು ಹೊಂದಿರುವ ದ್ರೌಪದಿಯೊಡನೆ ಮಹಿಳೆಯರು ತಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅವಳು ತನ್ನ ಅಸಂಪ್ರದಾಯಿಕ ಜೀವನಶೈಲಿ ಮತ್ತು ಪ್ರತೀಕಾರದ ದಾಹಗಳಿಂದಾಗಿ ಇತರರಲ್ಲಿ ಭಯಭಕ್ತಿಯನ್ನು ಹುಟ್ಟಿಸುತ್ತಾಳೆ. ಆದರೆ ಸೀತೆ ಹಾಗಲ್ಲ, ಅವಳು ಪಕ್ಕದ ಮನೆಯ, ತುಂಬಾ ಪರಿಚಿತ, ನೋವನ್ನು ಹಂಚಿಕೊಳ್ಳಲು ಸಾಧ್ಯವಾಗುವ ಮಹಿಳೆಯಾಗಿ ಕಾಣುತ್ತಾಳೆ. ಶ್ರೀಮಂತ ವರ್ಗದ ಒಂದು ಭಾಗವಾಗುಳಿಯುವುದಿಲ್ಲ ; ಎಂದೂ ಪ್ರತಿಭಟಿಸುವುದಿಲ್ಲ ಈ ಪುರುಷ ಪ್ರಧಾನ ಸಂಪ್ರದಾಯಗಳಿಗನುಸಾರ ಮಹಿಳೆಯ ದೊಡ್ಡ ಗುಣವಾದ ತ್ಯಾಗದ ಸಂಕೇತವಾಗುತ್ತಾಳೆ. ಹಾಡುಗಳಲ್ಲಿ ತಾನು ದುಃಖಿಸುತ್ತಾಳೆಯೇ ಹೊರತು ರಾಮನಿಗೆ ಸವಾಲು ಹಾಕುವುದಿಲ್ಲ. ಮಹಿಳೆಯರು ತಮ್ಮ ಪರವಾಗಿ ಇತರರು ಮಾತಾಡುವುದನ್ನು ನಿರೀಕ್ಷಿಸುವಂತೆ ಸೀತೆಯ ಪರವಾಗಿ ಇತರ ಮಹಿಳೆಯರು ಮಾತಾಡುತ್ತಾರೆ. ಚಂದ್ರಬತಿಯ ಕವನದಲ್ಲೂ ರಾಮನನ್ನು ಕಟುವಾಗಿ ಟೀಕಿಸಲಾಗಿದೆ, ಸೀತೆಯು ಒಬ್ಬ ಸಾಧುಸ್ವಭಾವದ ಪತ್ನಿಯಾಗಿ ಉಳಿಯುತ್ತಾಳೆ. ನಿರೂಪಕಿಯು ಅವಳ ಹೆಸರಿನಲ್ಲಿ ತನ್ನ ಚಾಟಿಯನ್ನು ಬೀಸುತ್ತಾಳೆ. ಸೀತೆ ಮೇರೆಯರಿಯದ

ಸಹನಾಶೀಲೆ; ತಾನು ಕಳೆದುಕೊಂಡಾಗಲೂ ವಿಜೇತೆ; ತನ್ನ ಕಷ್ಟಕ್ಕೆ ಘನತೆಯನ್ನು ತಂದುಕೊಡುತ್ತಾಳೆ; ಸಹನೆಯನ್ನು ಒಂದು ಉದಾತ್ತಗುಣವನ್ನಾಗಿ ಮಾಡುತ್ತಾಳೆ. ಇದೇ ಆವಳನ್ನು ಭಾರತೀಯ ಮಹಿಳೆಯರಿಗೆ ಮಾದರಿ ಪಾತ್ರವನ್ನಾಗಿಸುತ್ತದೆ. ಕಳೆದ ಕೆಲವುದಶಕಗಳಲ್ಲಿ ಭಾರತದಲ್ಲಿ ಹಲವಾರು ಬದಲಾವಣೆಗಳುಂಟಾದಾಗಲೂ ಬಹುಸಂಖ್ಯಾತ ಮಹಿಳೆಯರಿಗೆ ನ್ಯಾಯವು ಒಂದು ಕನಸಾಗಿ, ಸಮಾನತೆ ಒಂದು ಅಸಂಬದ್ಧತೆಯಾಗಿ, ಕಷ್ಟಗಳು ದಿನನಿತ್ಯದ ವಾಸ್ತವ ಸಂಗತಿಗಳಾಗಿ ಉಳಿದಿವೆ. <u>ರಾಮಾಯಣ</u>ವನ್ನು ಮಹಿಳೆಯರು ಮರುಕಥಿಸಿದರೆ, ಅವರು ತಮಗೆ ತಾವೇ ನೆಲೆಯಿಲ್ಲದ ಹೆಣ್ಣು, ತಬ್ಬಲಿ ಹೆಣ್ಣು ಪ್ರೀತಿಕಾಣದ, ತಿರಸ್ಕೃತ ಮತ್ತು ಅರಕ್ಷಿತ ಹೆಣ್ಣು ಎಂದು ಕರೆದುಕೊಳ್ಳುತ್ತಾ 'ಸೀತೆ' ಎಂದು ಹೆಸರಿಟ್ಟುಕೊಳ್ಳುತ್ತಾರೆ.

******

<u>ಮೂಲ</u> : ನವನೀತ ದೇವಸೇನ್‌ರ 'ಲೇಡಿ ಸಿಂಗ್ಸ್ ದಬ್ಲೂಸ್ ವೆನ್ ವಿಮೆನ್ ರಿಟೆಲ್ ಧ ರಾಮಾಯಣ'
ಮಾನುಷಿ ಲೇಖನ: 24-1-2002
ರ 108 ನೇ ಸಂಚಿಕೆಯಲ್ಲಿ ಪ್ರಕಟ:

<u>ಭಾವಾನುವಾದ</u> : ಡಾ.ವೆಂ.ವನಜ, ಮೈಸೂರು.

# ನದಿಯ ಮಾತಿಗೆ ಕಿವಿಗೊಡುವ ಸೂಕ್ಷ್ಮತೆ ಇರಬೇಕು

ಕಾವೇರಿ ವಿವಾದ ಮತ್ತೆ ಪ್ರಾರಂಭವಾಗಿ ವ್ಯಾಪಕಗೊಂಡಿದೆ. ಹಲವು ದಶಕಗಳಷ್ಟು ಹಳೆಯದಾದ ವಿವಾದಕ್ಕಿನ್ನೂ ಪರಿಹಾರ ಸಾಧ್ಯವಾಗದಿರುವುದಕ್ಕೆ ರಾಜಕೀಯ ಇಚ್ಚಾ ಶಕ್ತಿ ಇಲ್ಲದ ಭ್ರಷ್ಟ ಸರ್ಕಾರಗಳೇ ಕಾರಣ.

ನಮ್ಮ ರಾಜ್ಯ ಬರಗಾಲದಿಂದ ತತ್ತರಿಸುತ್ತಿದೆ. 3 ಸಾವಿರಕ್ಕೂ ಹೆಚ್ಚಿನ ಹಳ್ಳಿಗಳಲ್ಲಿ ಕುಡಿಯುವ ನೀರಿನ ತೀವ್ರ ಅಭಾವವುಂಟಾಗಿದೆ ಎಂದು ಸರ್ಕಾರದ ವರದಿಗಳೇ ಹೇಳಿವೆ. ಸುಮಾರು 14 ಸಾವಿರ ಕೊಳವೆ ಬಾವಿಗಳು 3-4 ವರ್ಷಗಳಿಂದ ಹಾಳಾಗಿರುವುದಕ್ಕೆ ಅಂತರ್ಜಲ ಕುಸಿತವೂ ಕಾರಣವಾಗಿದೆ.

ಮೂರು ಜಲಾಶಯುಗಳಿದ್ದರೂ ಸಹ ಹೆಗ್ಗಡದೇವನಕೋಟೆ ತಾಲೂಕಿನಲ್ಲಿ ನೀರಾವರಿ ಸೌಲಭ್ಯ ದೊರೆತಿರುವುದು 9000 ಎಕರೆ ಜಮೀನಿಗೆ ಮಾತ್ರ. ಅಲ್ಲಿನ ಕಬಿನಿ ಜಲಾಶಯ ನುಂಗಿದ್ದು ಹಲವಾರು ಹಳ್ಳಿಗಳನ್ನು, ಗಿರಿಜನರ ಹಾಡಿಗಳನ್ನು, ಸಾವಿರಾರು ಎಕರೆ ಅರಣ್ಯ ಪ್ರದೇಶವನ್ನು. ಅಲ್ಲಿನ ಗಿರಿಜನರೀಗ ಭಿಕಾರಿಗಳು, ಅತಂತ್ರರು.

ಆಲಮಟ್ಟಿ ಮತ್ತು ನಾರಾಯಣಪುರ ಅಣೆಕಟ್ಟು ಯೋಜನೆಯಿಂದಾಗಿ ಬಾಗಲಕೋಟೆ ನಗರದೊಂದಿಗೆ 201 ಹಳ್ಳಿಗಳು ಜಲಸಮಾಧಿಯಾಗಲಿವೆ. 4 ಲಕ್ಷ ಜನ ಬಾಳಿ ಬದುಕಿದ ನೆಲೆ ಕಳೆದು ಕೊಂಡು ಸಂತ್ರಸ್ತರಾಗಲಿದ್ದಾರೆ. 25 ಲಕ್ಷ ಎಕರೆ ಜಮೀನು ನೀರಾವರಿ ಯಾಗುವುದು ಮತ್ತು 1200 ಮೆಗಾವಾಟ್ ವಿದ್ಯುತ್ ಶ್ಚಕ್ತಿ ಉತ್ಪಾದಿಸಬಹುದೆಂದು ಹೇಳಲಾಗಿದೆ. ನೀರಾವರಿ ಜಮೀನಾಗಲಿ, ವಿದ್ಯುತ್ ಆಗಲಿ ಬಡವರಿಗೆ ದಕ್ಕೀತೆ?

ಮುಂಬರುವ ಎಲ್ಲಾ ಗಲಭೆಗಳಿಗೂ ನೀರಿನ ವಿವಾದಗಳೇ ಮೂಲವಾಗಲಿದೆಯೆಂದು ಹೇಳಲಾಗಿದೆ. ಅದರಲ್ಲಿ ಸಂಶಯವೇನಿಲ್ಲ. ಸಮಸ್ಯೆಯ ಮೂಲವಿರುವುದೆಲ್ಲಿ? ಸಮಸ್ಯೆ ಬರಿ ನೀರು ಹಂಚಿಕೆಯದಾದರೆ ಕೋರ್ಟು, ಕಾಯ್ದೆ, ಪ್ರಾಧಿಕಾರ, ಹೋರಾಟಗಳ ಮೂಲಕ ಪರಿಹಾರ ಹುಡುಕಬಹುದು. ಆದರೆ ಮಳೆ ಕೈ ಕೊಟ್ಟರೆ, ಅಂತರ್ಜಲ ಇಂಗಿ ಹೋದರೆ ಯಾರೊಡನೆ ಚರ್ಚಿಸ ಬೇಕು ? ಯಾವ ಕಾಯ್ದೆ ಪ್ರಾಧಿಕಾರಕ್ಕೆ ಮೊರೆ ಹೋಗ ಬೇಕು ? ಸಮಸ್ಯೆಗೆ ಮನುಷ್ಯರೆಷ್ಟು ಹೊಣೆ?

ನೆಹರೂರವರಿಂದ ಆಧುನಿಕ ದೇವಾಲಯಗಳೆಂದು ಕರೆಸಿ ಕೊಂಡು ದೊಡ್ಡ ಅಣೆ ಕಟ್ಟುಗಳು ಜೀವ ವಿರೋಧಿ ಎಂದೂ ಆರ್ಥಿಕವಾಗಿ ಲಾಭದಾಯಕವಲ್ಲವೆಂದು ಈಗಾಗಲೆ ಸಾಬೀತಾಗಿದೆ. ಅಭಿವೃದ್ಧಿ ಯೋಜನೆಗಳು ವ್ಯಾಪಾರಿಗಳು, ದಳ್ಳಾಳಿಗಳು, ರಾಜಕಾರಣಿಗಳು, ಅಧಿಕಾರಶಾಹಿಗಳು ನಡೆಸುವ ದಂಧೆಯಾಗಿವೆಯೇ ಹೊರತು ಹಸಿವು ನೀಗುವ ದಾರಿಗಳಾಗಿಲ್ಲ. ಕಡಿದಿರುವ ಕಾಡುಗಳು, ಕೀಡೆ ನಾಶಕಗಳು, ರಾಸಾಯನಿಕ ಗೊಬ್ಬರಗಳ ಮೂಲಕ ವಿಷಮಯ ಮಾಡಿರುವ ಜೀವ ಸಂಕುಲ, ನದಿಗಳು, ಗಾಳಿ . ಈ ಎಲ್ಲಾ ಅಭಿವೃದ್ಧಿಗಳನ್ನು ಹಿಂತಿರುಗಿ ನೋಡಿ ಚಿಂತಿಸುವ ತುರ್ತು ಅಗತ್ಯವಿದೆ. ನದಿ ಹರಿಯುವ ಜೀವ ವಾಹಿನಿ. ಅದನ್ನು ಮನುಷ್ಯರು ತಮ್ಮ ಸ್ವತ್ತೆಂದು ಕೊಂಡು ಬೇಕಾಬಿಟ್ಟಿ ವರ್ತಿಸುವುದು ಉದ್ಧಟತನ. ಈ ಉದ್ಧಟತನವೇ ಹಲವಾರು ದುರಂತಗಳಿಗೆ ಕಾರಣವಾಗಿದೆ. ಅಭಿವೃದ್ಧಿಯ ಬಗ್ಗೆ ಯೋಚಿಸುವಾಗ ಗಾಳಿ, ನೀರು, ಮಣ್ಣಿನ ಮಾತಿಗೂ ಕಿವಿಗೊಡುವ ಸೂಕ್ಷ್ಮತೆ ಇರಬೇಕು. ಜೀವ ಜಲಕ್ಕೆ ಹೋರಾಡುವಂತೆ. ವಿಷ ತುಂಬಿ ನದಿಯ ಕತ್ತು ಹಿಸುಕುವುದರ ವಿರುದ್ಧ ಹೋರಾಡುವ ಅಗತ್ಯವಿದೆ. ಕೆಂಗೇರಿ ಬಳಿ ಹರಿವ ದೊಡ್ಡ ಕೊಳಚೆ ನೀರಿನ ಮೋರಿ ಹಿಂದೊಮ್ಮೆ ಸ್ವಚ್ಛ ನೀರಿನ ವೃಷಭಾವತಿ ನದಿಯಾಗಿತ್ತೆಂದು ಅದರ ನೀರು ಕುಡಿದು, ಅದರಲ್ಲಿ ಮಿಂದು, ಆಡಿದ ಹಿರಿಯರು ಹೇಳುತ್ತಾರೆ.

## ಕರ್ನಾಟಕ 'ವಿಮೋಚನಾ ರಂಗ'ದವರು ಕಾವೇರಿ ವಿವಾದಕ್ಕೆ ಸಂಬಂಧಿಸಿದಂತೆ ಹೊರತಂದ ಕರಪತ್ರವನ್ನು ಓದುಗರಿಗಾಗಿ ಪ್ರಕಟಿಸಿದ್ದೇವೆ.

**ಕೇಂದ್ರ ಸರ್ಕಾರದ ಒಡೆದಾಳುವ ನೀತಿಯನ್ನು, ಅವೈಜ್ಞಾನಿಕ ತೀರ್ಪನ್ನು ಖಂಡಿಸೋಣ !**

**ಕಾವೇರಿ ನದಿ ವಿವಾದದ ಶಾಶ್ವತ, ನಿಷ್ಪಕ್ಷಪಾತ ವೈಜ್ಞಾನಿಕ ಪರಿಹಾರಕ್ಕಾಗಿ ಹೋರಾಡೋಣ !!**

ಆತ್ಮೀಯ ನಾಡ ಬಾಂಧವರೇ, ವಿದ್ಯಾರ್ಥಿ, ರೈತ-ಬುದ್ಧಿ ಜೀವಿಗಳೇ,

ಈ ತಿಂಗಳಲ್ಲಿ ಮೈತುಂಬಿಕೊಂಡು, ಭೋರ್ಗರೆದು ಪ್ರವಹಿಸಬೇಕಿದ್ದ ಜೀವನದಿ ಕಾವೇರಿ, ಮಳೆಯಿಲ್ಲದೆ ಚಿಕ್ಕದೊಂದು ತೊರೆಯಾಗಿ ಹರಿಯುತ್ತಿದ್ದಾಳೆ. ಕರ್ನಾಟಕ ಮತ್ತು ತಮಿಳುನಾಡಿನ ಕೋಟ್ಯಾಂತರ ಜನರ ನೀರಡಿಕೆ ತಣಿಸುವ ಲಕ್ಷಾಂತರ ಎಕರೆಗಳಿಗೆ ನೀರುಣಿಸುವ, ಕಾವೇರಿ ತಳ್ಳಗೆ ಹರಿದಾಗಲೆಲ್ಲ ಉದ್ಭವಿಸುವ ಬಿಕ್ಕಟ್ಟು ಇಂದೂ ಉಂಟಾಗಿದೆ. ಮಂಡ್ಯ, ಮೈಸೂರುಗಳ ರೈತರು ಆಕ್ರೋಶಗೊಂಡು ಅಣೆಕಟ್ಟುಗಳಿಗೆ ಸಾವಿರಗಟ್ಟಲೆ ಸಂಖ್ಯೆಯಲ್ಲಿ ಮುತ್ತಿಗೆ ಹಾಕುತ್ತಿದ್ದಾರೆ ದಶಕಗಳ ಕಾಲ ನಿದ್ರಿಸುತ್ತ ಕೂತಿರುವ ರಾಜಕಾರಣಿಗಳು ಈಗ ಇದ್ದಕ್ಕಿದ್ದಂತೆ, ನೀರಿಲ್ಲದೆ ಪರಿತಪಿಸುತ್ತಿರುವ, ಸಿಟ್ಟುಗೊಂಡಿರುವ ರೈತರೆದುರು ವೀರಾವೇಶದ ಪೋಸು ಕೊಡುತ್ತಿದ್ದಾರೆ. ಕರ್ನಾಟಕದಿಂದ ತಮಿಳುನಾಡಿಗೆ ಹರಿಯುತ್ತಾ ಇಬ್ಬರ ಪಾಲಿಗೂ ಜೀವದಾಯಿನಿಯಾಗುವ ಕಾವೇರಿ ಈಗ ಎರಡೂ ಕಡೆ "ವಿವಾದ"ದ ವಸ್ತುವಾಗಿಟ್ಟಿದ್ದಾಳೆ.

ನಾಡ ಪ್ರೇಮಿಗಳೇ, ಇಂಥ ಪರಿಸ್ಥಿತಿಗೆ ಕಾರಣವೇನು ? ಅತೀವ ಬವಣೆಗೆ ತುತ್ತಾಗಿರುವ ರೈತರ ಸಂಕಷ್ಟಗಳನ್ನು ಮನಗಂಡು ಪರಿಹಾರ ಹುಡುಕಬೇಕಿದ್ದ ಆಳುವ ಧಣಿಗಳು ಏನು ಮಾಡುತ್ತಿದ್ದಾರೆ ? ಎರಡು ರಾಜ್ಯಗಳ ನಡುವಿನ ಇಂಥಹ ಸಮಸ್ಯೆಯನ್ನು ನಿಷ್ಪಕ್ಷಪಾತವಾಗಿ ಬಗೆಹರಿಸಬೇಕಾದ ಕರ್ತವ್ಯವಿರುವ ಕೇಂದ್ರ ಸರ್ಕಾರವೇನು ಮಾಡಿದೆ ? ಈ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕಂಡುಕೊಂಡು. ಇದಕ್ಕೊಂದು ಶಾಶ್ವತ ಪರಿಹಾರ ರೂಪಿಸುವ ನಿಟ್ಟಿನಲ್ಲಿ ಸಾಗಬೇಕಿದೆ.

### ತೀರ್ಪಿನ ಅವೈಜ್ಞಾನಿಕತೆ ಮತ್ತು ಕೇಂದ್ರ ಸರ್ಕಾರದ ಒಡೆದಾಳುವ ನೀತಿ :

ಸುಪ್ರೀಂ ಕೋರ್ಟು ಸೆಪ್ಟೆಂಬರ್ 3ರ ರಂದು ತೀರ್ಪೊಂದನ್ನು ನೀಡಿ ಕರ್ನಾಟಕದಿಂದ ಪ್ರತಿನಿತ್ಯ 1.25 ಟಿ.ಎಂ.ಸಿ. ನೀರನ್ನು ಬಿಡಬೇಕೆಂದು ಹೇಳಿತು. ಕರ್ನಾಟಕ ರಾಜ್ಯ ಸರ್ಕಾರವು ಇಲ್ಲಿನ ಪರಿಸ್ಥಿತಿಯ ಚಿತ್ರಣ ಕೊಟ್ಟಿತ್ತು. ಕರ್ನಾಟಕದ ಎಲ್ಲಾ ಜಲಾಶಯಗಳಲ್ಲಿ ಶೇಖರವಾಗಿರುವ ನೀರಿನ ಪ್ರಮಾಣ ಸುಮಾರು 45 ಟಿ.ಎಂ.ಸಿ. ಆಗುತ್ತದೆಂದು ಹೇಳಿತು. ಈ ಸಾರಿ ಮಳೆಯಿಲ್ಲದೆ ಬರದ ಪರಿಸ್ಥಿತಿ ಎದುರಿಸಬೇಕಾಗಿ ಬಂದಿರುವುದನ್ನು ಮಂಡಿಸಿತ್ತು. ಇದೆಲ್ಲವನ್ನು ಕೇಳಿದ ನಂತರವೂ, ಸುಪ್ರೀಂ ಕೋರ್ಟು "ಕಾವೇರಿ ಪ್ರಾಧಿಕಾರ" ತೀರ್ಪುನೀಡುವವರೆಗೂ ಪ್ರತಿನಿತ್ಯ 1.25 ಟಿ.ಎಂ.ಸಿ ನೀರನ್ನು ಬಿಡಲು ಹೇಳಿತು. ಕಡಿಮೆ ಮಳೆಯಿರುವ ಈ ವರ್ಷದಲ್ಲಿ. ಒಳಹರಿವು ಇಲ್ಲದೆ ಹೋದರೆ ಕರ್ನಾಟಕಕ್ಕೆ ಕಾಯ್ದಿಟ್ಟುಕೊಂಡ ಕುಡಿಯುವ ನೀರೂ ಸೇರಿದಂತೆ ಇಡೀ ಕಟ್ಟೆ ಖಾಲಿಯಾಗಬೇಕಾಗುತ್ತಿತ್ತು. ಇದರಿಂದಾಗಿ ಭುಗಿಲೆದ್ದ ಕರ್ನಾಟಕದ ಜನರ ಆಕ್ರೋಶವನ್ನು ಕಂಡ ನಂತರ ಮತ್ತೆ ಪ್ರಧಾನಿ ಅಧ್ಯಕ್ಷತೆಯ ಪ್ರಾಧಿಕಾರ ಎರಡು ತಿಂಗಳ ಕಾಲ ದಿನಕ್ಕೆ 9,000 ಕ್ಯೂಸೆಕ್ಸ್ ನಂತೆ ನೀರು ಬಿಡಲು ಹೇಳಿತು. ಒಳ ಹರಿವು 15,000 ಕ್ಯೂಸೆಕ್ಸ್ ಇರುವುದರಿಂದ ಇಷ್ಟನ್ನು ಬಿಡಬಹುದು ಎಂಬ ಲೆಕ್ಕಾಚಾರ ಮುಂದಿಡಲಾಯಿತು. ಒಂದು ವೇಳೆ ಹಾಗಿದ್ದರೆ 1.25 ಟಿ.ಎಂ.ಸಿ.ಗಿಂತ ಈ ಸೂತ್ರ ಒಳ್ಳೆಯದಾಗಿದ್ದು ನೀರನ್ನು ಬಿಡಬಹುದಾಗಿದೆ. ಆದರೆ ನೀರಿನ ಒಳಹರಿವು ಇದೇ ಪ್ರಮಾಣದಲ್ಲಿ ಮುಂದುವರೆಯುತ್ತದೆ ಎಂಬುದು ಏನು ಗ್ಯಾರಂಟಿ ? 'ಎರಡು ತಿಂಗಳುಗಳ ಕಾಲ' ಎಂಬುದು ಬೇರೆ ಇರುವುದರಿಂದ. ಒಳಹರಿವು ನಿಂತುಬಿಟ್ಟರೆ. ಈಗ ಕರ್ನಾಟಕದ ಜಲಾಶಯಗಳಲ್ಲಿ ಇರುವುದಕ್ಕಿಂತ ಹೆಚ್ಚಿನ ನೀರನ್ನು ಬಿಡಬೇಕಾಗುವ ಪರಿಸ್ಥಿತಿ ಬಂದುಬಿಡುತ್ತದೆ.

ನೀರು ಹೆಚ್ಚಿದ್ದಾಗ ಹಂಚಿಕೊಳ್ಳುವಂತೆ, ಸಂಕಷ್ಟವನ್ನು ಸಹ ಅದೇ ಅನುಪಾತದಲ್ಲಿ ಹಂಚಿಕೊಳ್ಳಬೇಕಲ್ಲವೇ ? ಕರ್ನಾಟಕಕ್ಕೆ ಕುಡಿಯಲು ಬೇಕಾದ ನೀರನ್ನು ಕಾಯ್ದಿರಿಸಿಕೊಂಡು ಒಣಗಿ ಹೋಗುತ್ತಿರುವ ಬೆಳೆಯ ಪ್ರಮಾಣವನ್ನು ಆಧರಿಸಿ ಶೇಕಡಾವಾರು ಪ್ರಮಾಣದಲ್ಲಿ ನೀರನ್ನು ಹಂಚಿಕೊಳ್ಳಬೇಕಿದ್ದದ್ದು ನ್ಯಾಯ ಸಮ್ಮತ. ಈ ಶೇಕಡವಾರು ಹಂಚಿಕೆಯೇ ವೈಜ್ಞಾನಿಕವಾದದ್ದು. ಆದರೆ, ನೀರು ಬರಲಿ ಬಿಡಲಿ ದಿನಕ್ಕೆ ಇಂತಿಷ್ಟು ಕ್ಯೂಸೆಕ್ಸ್ / ಟಿ.ಎಂ.ಸಿ.ಗಳು ಎಂದು ನಿಗದಿಪಡಿಸಿ ಮಳೆ ಇಲ್ಲದೆಯೇ ಹೋದರೆ ಮೇಲ್ಭಾಗದ ಅಣೆಕಟ್ಟುಗಳು ಸಂಪೂರ್ಣ ಖಾಲಿಯಾಗಿಬಿಡುತ್ತವೆ. ಹೀಗಾಗಿ ಶೇಕಡವಾರು ಹಂಚಿಕೆ ನಿಗದಿ ಮಾಡಿದಲ್ಲಿ ಮಳೆ ಬಂದು ಹೆಚ್ಚಿನ ಒಳಹರಿವು ಇದ್ದಲ್ಲಿ ಹೆಚ್ಚಿನ ನೀರನ್ನೂ ಕಡಿಮೆ ಒಳಹರಿವು ಇದ್ದರೆ ಕಡಿಮೆ ನೀರನ್ನೂ ಬಿಡಬೇಕು. ಈ ಸೂತ್ರವನ್ನು ಅನುಸರಿಸುವುದು ತಾರ್ಕಿಕವಾಗಿ ಸರಿಯಾದದ್ದು.

ಆದರೆ ಪರಕೀಯ ಬ್ರಿಟೀಷರಿಂದ ಕಲಿತುಕೊಂಡ 'ಒಡೆದಾಳುವ ನೀತಿ'ಯನ್ನು ಚೆನ್ನಾಗಿ ಕರಗತ ಮಾಡಿಕೊಂಡಿರುವ ಕೇಂದ್ರ ಸರ್ಕಾರವು ಇಬ್ಬರ ಮಧ್ಯೆ ಜಗಳ ತಂದಿಡುವ ಕೆಲಸವನ್ನೇ ಮಾಡಿತು. ಕೇಂದ್ರದ ಕೈಯಲ್ಲಿ ದಾಳವಾಗಿರುವ ಸುಪ್ರೀಂ ಕೋರ್ಟು ಸಹ ಅದನ್ನೇ ಮಾಡಿತು. ಇಂತಹುದನ್ನೇ ಕೇಂದ್ರವು ಹಲವು ದಶಕಗಳಿಂದ ಮಾಡಿಕೊಂಡು ಬಂದಿದೆ. ಪಂಜಾಬ್ ಮತ್ತು ಹರಿಯಾಣಗಳ ನಡುವೆ, ನಾಗ ಮತ್ತು ಕುರ್ಕಿಗಳ ನಡುವೆ ಇದೆ ರೀತಿಯ ಒಡೆದಾಳುವ ಹಿತಾಸಕ್ತಿಗೆ ತಕ್ಕಂತೆ ಇಲ್ಲೂ ವರ್ತಿಸಿತು.

ಜೊತೆಗೆ ಕರ್ನಾಟಕದ ಮುಖ್ಯಮಂತ್ರಿ ದಿಲ್ಲಿಗೆ ಹೋಗಿ ಕಾದುಕೂತರೂ ಸಹ, 3 ದಿನಗಳ ಕಾಲ ಪ್ರಧಾನಿ ಸಂದರ್ಶನವನ್ನೇ ನೀಡಿರಲಿಲ್ಲ. ಕೇಂದ್ರದ ಇಂತಹ ಧೋರಣೆಯನ್ನು ನಾವು ಖಂಡಿಸಲೇಬೇಕು.

## ನಿದ್ರೆ ಹೋಗಿದ್ದ ರಾಜಕಾರಣಿಗಳು - ರಾಜಕೀಯ ಪಕ್ಷಗಳ ದುಷ್ಟ ಹಿತಾಸಕ್ತಿ

91ರ ಬಿಕ್ಕಟ್ಟಿನ ನಂತರ ಕರ್ನಾಟಕದಲ್ಲಿ ಕಾಂಗ್ರೆಸ್ಸು ಮತ್ತು ಜನತಾ ಪರಿವಾರಗಳೆರಡು ಆಳ್ವಿಕೆ ನಡೆಸಿವೆ. ತಮಿಳುನಾಡಿನಲ್ಲಿ ಅಲ್ಲಿನ ಎರಡು ಪ್ರಮುಖ ಪಕ್ಷಗಳೂ ಸಹ ಗದ್ದುಗೆ ಹಿಡಿದಿವೆ. ಕೇಂದ್ರದಲ್ಲಿ ಬಿಜೆಪಿ ಸರ್ಕಾರವಿದೆ. ಈ 12 ವರ್ಷಗಳ ಕಾಲದಲ್ಲಿ ಸಂಕಷ್ಟ ಸಮಯದ ನೀರಿನ ಹಂಚಿಕೆಯ ಸೂತ್ರವೊಂದನ್ನು ರೂಪಿಸಲು ಇವರಿಗೆ ಆಗಲಿಲ್ಲವೆ? 91 ಕ್ಕೆ ಮಧ್ಯಂತರ ಆದೇಶವನ್ನು ನೀಡಿದ್ದ ಕಾವೇರಿ ನ್ಯಾಯಮಂಡಳಿ, ಪೂರ್ಣ ವರದಿಯನ್ನು ಇಲ್ಲಿಯವರೆಗೂ ಏಕೆ ನೀಡಿಲ್ಲ? ಜನರ ಕಷ್ಟಗಳನ್ನು ಪರಿಹರಿಸುವ ಬಗ್ಗೆ ಇರುವ, ಅತ್ಯಂತ ಬೇಜವಾಬ್ದಾರಿತನದ ಧೋರಣೆಯೇ ಇದಕ್ಕೆ ಕಾರಣವಾಗಿದೆ.

ಆದರೆ ಸಮಸ್ಯೆ ಬಂದಾಗ ಮಾತ್ರ, ಇವರುಗಳು ಇದ್ದಕ್ಕಿದ್ದಂತೆ 'ಜನ-ನಾಯಕ'ರಾಗಿಬಿಡುತ್ತಾರೆ. ಪ್ರಾಣ ಕೊಡಲು ಸಿದ್ಧರಾದ ವೀರರಾಗಿಬಿಡುತ್ತಾರೆ. ತನ್ನ ರಾಜಕೀಯ ಲೆಕ್ಕಾಚಾರಕ್ಕೆ ತಕ್ಕಂತೆ ವಿವಾದದಲ್ಲಿ ಯಾವುದಾದರೊಂದು ಪಕ್ಷ ವಹಿಸಿ ದ್ರೋಹ ಬಗೆಯುತ್ತಾರೆ.

ಇದರ ಜೊತೆಗೆ ಆಗಾಗ ಒಂದು ಪ್ರಹಸನವೂ ನಡೆಯುತ್ತಿರುತ್ತಿದೆ. ಮಳೆಯ ಪ್ರಮಾಣದಲ್ಲಿ ಏರುಪೇರು ಆದ ಕೂಡಲೇ ಇದು ಪ್ರಾರಂಭವಾಗುತ್ತದೆ. ಕರ್ನಾಟಕ ಸರ್ಕಾರ 'ಒಂದು ಹನಿ ನೀರನ್ನೂ ಬಿಡುವುದಿಲ್ಲ' ಎಂದು ಮೊದಲೇ ಘೋಷಣೆ ಮಾಡಿಬಿಡುತ್ತದೆ. ನಂತರ ಕೇಂದ್ರ ಸರ್ಕಾರದಿಂದ ಅಥವಾ ಕೋರ್ಟಿನಿಂದ ಒತ್ತಡ ಬಂದಾಗ ನೀರನ್ನು ಬಿಡುತ್ತದೆ. ತಮಿಳುನಾಡು ಸರ್ಕಾರವು ಕರ್ನಾಟಕದ ಜಲಾಶಯಗಳಲ್ಲಿನ ನೀರಿನ ಮಟ್ಟವನ್ನು ಸರಿಯಾಗಿ ನೋಡಿಕೊಂಡು. ಅದರ ಆಧಾರದ ಮೇಲೆ ಇಷ್ಟು ನೀರು ಕೊಡಿ ಎಂದು ಹೇಳುವುದಕ್ಕಿಂತ 'ಇಷ್ಟು ನೀರು ಬೇಕು. ಅದನ್ನು ಹೇಗಾದರೂ ಸರಿ ಪಡೆಯುತ್ತೇವೆ' ಎಬು ಹೇಳಿಕೆಯನ್ನು ಕೊಡುತ್ತದೆ. ಇವೆರಡೂ ಪರಿಸ್ಥಿತಿ ಹದಗೆಡಲು ಕಾರಣವಾಗುತ್ತದೆ. ಹಾಗಾಗಿ ಜನಪರ/ರೈತಪರ ಸಂಘಟನೆಗಳು ಈ ಸರ್ಕಾರಗಳ ಧೋರಣೆಗೆ ಸೊಪ್ಪು ಹಾಕದೆ ಸರಿಯಾದ ಪರ್ಯಾಯವನ್ನು ಸೂಚಿಸಬೇಕಿದೆ. ಮೊದಲಿನಿಂದಲೂ 'ಇಂತಿಷ್ಟು ನೀರಿದೆ. ನಮ್ಮ ಪರಿಸ್ಥಿತಿ ಹೀಗಿದೆ, ಇಂತಿಷ್ಟು ಹಂಚಿಕೊಳ್ಳೋಣ' ಎಂಬಂತಹ ಧೋರಣೆಯನ್ನು ಇಟ್ಟುಕೊಳ್ಳಬೇಕಿದೆ.

## ತಾರ್ಕಿಕ ನಿಷ್ಪಕ್ಷಪಾತ ಪರಿಹಾರಕ್ಕಾಗಿ ಹೋರಾಡೋಣ

ತಮ್ಮಂತೆ ತಾವೇ ಆಳುವ ದೊರೆಗಳು ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವುದಿಲ್ಲ. ಪ್ರತಿಸಾರಿ ಜನರು ಬೀದಿಗೆ ಇಳಿದು ಪ್ರತಿಭಟನೆ ಮಾಡಿದ ನಂತರವೇ ಈ ವಿಚಾರ ಅವರ ಕಣ್ಣಿಗೆ ಬೀಳುತ್ತದೆ. ಹಾಗಾಗಿ ಜನರ ಹೋರಾಟದಿಂದಷ್ಟೇ ನ್ಯಾಯಸಮ್ಮತ ಪರಿಹಾರ ಕಾಣಲು ಸಾಧ್ಯ. ಕರ್ನಾಟಕ ಮತ್ತು ತಮಿಳುನಾಡುಗಳ ಜನರಿಬ್ಬರೂ ಪರಸ್ಪರ ಕೊಡುಕೊಳ್ಳು ಆಧಾರದ ಮೇಲೆ ವೈಜ್ಞಾನಿಕವಾಗಿ ಶೇಕಡಾವಾರು ಹಂಚಿಕೊಳ್ಳಬೇಕು. ಇದನ್ನು ಈ ರೀತಿಯಲ್ಲಿ ಪರಿಹರಿಸಲು ಜನವಿರೋಧಿ ಸರ್ಕಾರಗಳ ಮೇಲೆ ಒತ್ತಡ ತರಬೇಕು.

ಈಗ ತಕ್ಷಣದ ಸಮಸ್ಯೆಯ ಪರಿಹಾರಕ್ಕೂ ಸಹ ಅದೇ ಸೂತ್ರವನ್ನು ಪಾಲಿಸಬೇಕು. ಕರ್ನಾಟಕ್ಕೆ ಬೇಕಾದ ಕುಡಿಯುವ ನೀರಿನ ಪಾಲನ್ನು ಸಂಪೂರ್ಣ ಇಟ್ಟುಕೊಂಡು ಉಳಿದಿದ್ದನ್ನು ವೈಜ್ಞಾನಿಕವಾಗಿ ಹಂಚಿಕೊಳ್ಳಬೇಕು. ದಿನಕ್ಕಿಷ್ಟು ಎಂದು ನಿಗದಿ ಮಾಡುವ ಬದಲು ಒಳಹರಿವಿನ ಪ್ರಮಾಣ ಆಧರಿಸಿ ನೀರು ಹಂಚಿಕೊಳ್ಳಬೇಕು. ಈ ರೀತಿಯಲ್ಲಿ ನಮ್ಮ, ಸಮಸ್ಯೆಯನ್ನು ಪರಿಹರಿಸಿಕೊಳ್ಳೋಣ ಮತ್ತು ಶಾಶ್ವತ ಪರಿಹಾರಕ್ಕಾಗಿ ಹೋರಾಡೋಣ.

ಕಾವೇರಿ ವಿವಾದಕ್ಕೆ ಶಾಶ್ವತ ಪರಿಹಾರ ಹುಡುಕಿಕೊಳ್ಳಬೇಕಾಗಿದೆ. ಪರಿಹಾರ ನಿಷ್ಪಕ್ಷಪಾತವಾಗಿರಬೇಕು. ಪರಿಹಾರದಲ್ಲಿ ಎರಡೂ ರಾಜ್ಯಗಳ ಜನತೆಯನ್ನು ಒಳಗೊಳ್ಳಬೇಕು. ವಿವಾದವನ್ನೆ ತಮ್ಮ ಅಸ್ತ್ರಗಳಾಗಿಸಿಕೊಳ್ಳುವ ಜನವಿರೋಧಿ, ಬಾಯಿಬಡುಕ ನಾಯಕರುಗಳನ್ನು ದೂರವಿಡಬೇಕು. ಆದರೆ ಕಾವೇರಿ ವಿವಾದದಂತಹ ಗಂಭೀರ ವಿಷಯ ಕುರಿತು ಹೋರಾಟ ನಡೆಯುತ್ತಿರುವ ಸಂದರ್ಭದಲ್ಲಿ ಬಹಿರಂಗಗೊಳ್ಳುತ್ತಿರುವ ಅಸಹ್ಯಕರ ವಿಕೃತಿಗಳು ವಿಷಯದ ಗಂಭೀರತೆಯನ್ನೆ ಹಾಳುಗೆಡವಬಹುದು. ಜಯಲಲಿತಾಳನ್ನು ಕುರಿತು ' ಗಯ್ಯಾಳಿ, 'ಹೆಮ್ಮಾರಿ', ಬೆಡ್‌ರೂಂ ಮೂಲಕ ರಾಜಕೀಯಕ್ಕೆ ಬಂದವಳೆಂದು, ಅವಳ ಹುಟ್ಟಿನ ಮೂಲ ಇತ್ಯಾದಿ ಕುರಿತು ಪತ್ರಿಕೆಗಳು ಬರೆದವು. ಪ್ರತಿಭಟನೆಯಲ್ಲಿ ಆಕೆಯ ಅಸಹ್ಯಕರ ಗೊಂಬೆಗಳನ್ನು ಮಾಡಿ ಪ್ರದರ್ಶಿಸಿರುವುದು, ಹೊಲಸು ಘೋಷಣೆಗಳನ್ನು ಬರೆದಿರುವುದು ನಮ್ಮ ಭವ್ಯ ಸಂಸ್ಕೃತಿಯ ಕೊಳಕು ಪೌರುಷ ಮನಸ್ಸುಗಳನ್ನು ಪ್ರತಿಬಿಂಬಿಸುತ್ತದೆ. ಜಯಲಲಿತಾ ಅಲ್ಲದೆ ಕರುಣಾನಿಧಿ ಮುಖ್ಯಮಂತ್ರಿಯಾಗಿದ್ದರೆ ಈ ರೀತಿ ಪ್ರತಿಕ್ರಿಯೆ ಬರುತ್ತಿತ್ತೆ? ಹೋರಾಟದ ಉದ್ದೇಶವನ್ನೆ ಹಾಳುಗೆಡುವುವ ಅಸಹ್ಯಗಳ ಕುರಿತು ಚಳುವಳಿಯ ಮುಖಂಡರು ಎಚ್ಚೆತ್ತುಕೊಳ್ಳಬೇಕು. ನೀರಿನೊಂದಿಗೆ ಮಹಿಳೆಯರದು organic ಸಂಬಂಧ. ನೀರಿಗಾಗಿ ನಡೆದಿರುವ ಹೋರಾಟದಲ್ಲಿನ ಕೊಳಕು ಕೊಚ್ಚೆಗಳನ್ನು ಚಳುವಳಿಯಲ್ಲಿನ ಮಹಿಳೆಯರು ವಿರೋಧಿಸಬೇಕು. ಜಯಲಲಿತಾ ಹೆಂಗಸೆಂಬ ಕಾರಣಕ್ಕೆ ಅಸಹ್ಯವಾಗಿ ಪ್ರತಿಕ್ರಿಯಿಸುವುದನ್ನು ಮಾನಸ ತೀವ್ರವಾಗಿ ಖಂಡಿಸುತ್ತದೆ.

# ಸಂಘ ನಮ್ಮ ಶಕ್ತಿ - ಮಿಲಿನ್ ರಾನಡೆ

**ಮುಂಬೈನ ಮುನಿಸಿಪಲ್ ಕಾರ್ಪೋರೇಷನ್ನಲ್ಲಿ ಕೆಲಸಮಾಡುವ ಗುತ್ತಿಗೆ ಪೌರಕಾರ್ಮಿಕರ ಸಂಘದ ಮಿಲಿನ್ ರಾನಡೆಯವರು ಬೆಂಗಳೂರಿಗೆ ಬಂದಾಗ ಬೆಂ.ಮ.ಪಾ.ಗುತ್ತಿಗೆ ಪೌರಕಾರ್ಮಿಕರ ಸಂಘದವರೊಂದಿಗೆ ತಮ್ಮ ಅನುಭವವನ್ನು ಹಂಚಿಕೊಂಡರು. ಆ ಅನುಭವವನ್ನು ಓದುಗರಿಗಾಗಿ ದಾಖಲಿಸಿದ್ದೇವೆ.**

ಮುಂಬೈ ಮುನಿಸಿಪಲ್ ಕಾರ್ಪೋರೇಷನ್ನಲ್ಲಿ ಸುಮಾರು 2500 ಜನ ಗುತ್ತಿಗೆ ಕಾರ್ಮಿಕರಿದ್ದಾರೆ. ಅವರಲ್ಲಿ 1800 ಜನ ಮರಾಠಿಗಳಾದರೆ ಉಳಿದವರು ತಮಿಳರು. ಅವರೆಲ್ಲರೂ 12 ರಿಂದ 16 ಗಂಟೆಗಳ ಕೆಲಸವನ್ನು ಮಾಡುತ್ತಿದ್ದರು, ಓವರ್ ಟೈಮ್ ಇಲ್ಲದೆ. ಕಸವನ್ನು ಸಂಗ್ರಹಿಸಿ ಟ್ರಕ್‌ಗಳಿಗೆ ತುಂಬುವುದು, ಕೊಂಡೊಯ್ದು ನಿಗದಿತ ಸ್ಥಳದಲ್ಲಿ ಸುರಿಯುವ ಕೆಲಸವನ್ನು ಮಾಡುತ್ತಾರೆ. ಕೆಲಸಗಾರರಿಗೆ ಕುಡಿಯುವ ನೀರಿನ ವ್ಯವಸ್ಥೆ, ಕೈಕಾಲು ತೊಳೆದುಕೊಳ್ಳುವ ವ್ಯವಸ್ಥೆಯಾಗಲಿ ಕಸ ಸುರಿಯುವ ಸ್ಥಳದಲ್ಲಿ ಇರಲಿಲ್ಲ. ನಾನು ಈ ಕಾರ್ಮಿಕರ ಸಂಪರ್ಕಕ್ಕೆ ಹೇಗೆ ಬಂದೆನೆಂದರೆ - ಒಮ್ಮೆ ನಾನು ಬಸ್‌ನಲ್ಲಿ ಪ್ರಯಾಣಿಸುತ್ತಿದ್ದೆ. ಟ್ರಾಫಿಕ್ ಜಾಮ್ ಆದುದರಿಂದ ಒಂದುಗಂಟೆ ನಿಲ್ಲಬೇಕಾಯಿತು. ನಾನು ಕೂತಿದ್ದ ಬಸ್ ಪಕ್ಕದಲ್ಲೆ ಕಸ ತುಂಬಿದ ಲಾರಿಯು ನಿಂತಿತ್ತು. ವಿಪರೀತ ವಾಸನೆ ಬರುತ್ತಿತ್ತು. ಎಲ್ಲರೂ ಮೂಗು ಮುಚ್ಚಿಕೊಂಡರು. ಕಸದ ಲಾರಿಯಲ್ಲಿ ಕಸದ ಮೇಲೆ ಕುಳಿತಿದ್ದ ಕಾರ್ಮಿಕರು ಅಲ್ಲೆ ತಿಂಡಿ ತಿಂದರು. ನನಗೆ ಆ ದಿನ ಊಟ ಮಾಡಲಾಗಲಿಲ್ಲ. ಅವರ ಸ್ಥಿತಿ ಹೇಗಿರಬಹುದೆಂದು ಕಲ್ಪಿಸಿಕೊಳ್ಳಲಾಗಲಿಲ್ಲ.

ಮರುದಿವಸ ಕಸದ ಲಾರಿಯನ್ನೆ ಹಿಂಬಾಲಿಸಿಕೊಂಡು ಕಸ ಸುರಿಯುವ ಸ್ಥಳಕ್ಕೆ ಹೋದೆ. ಅಲ್ಲಿ 400 ಲಾರಿಗಳಿದ್ದವು. ಒಂದೊಂದು ಲಾರಿಯಲ್ಲಿ ಮೂವರು ಕಾರ್ಮಿಕರಿದ್ದರು. ಅವರಿಗೆ ಪ್ರತಿ ಟ್ರಿಪ್ಪಿಗೆ 30 ರೂ ಸಿಕ್ಕುತ್ತಿದ್ದು ಪ್ರತಿಯೊಬ್ಬರು ಮೂರು ಟ್ರಿಪ್ ಮಾಡುತ್ತಿದ್ದರು. ಮುಂಬೈನ ಟ್ರಾಫಿಕ್‌ನಲ್ಲಿ ಮೂರು ಟ್ರಿಪ್ ಮಾಡಲು 12 ಗಂಟೆ ಬೇಕಾಗುತ್ತದೆ. ಲಾರಿ ಏನಾದರು ಪಂಕ್ಚರ್ ಆದರೆ 16 ಗಂಟೆಗಳಾಗುತ್ತದೆ.

ಗುತ್ತಿಗೆದಾರರಿಗೆ ಒಂದು ಲಾರಿಗೆ ಒಂದು ದಿನಕ್ಕೆ ಸಿಗುವ ಹಣ 1800/- ರೂ. ಲಾರಿ ಹೆಚ್ಚಿರುವ ಮಾಲೀಕರುಗಳು ಪ್ರತಿದಿನಕ್ಕೆ ಕನಿಷ್ಟ 18000 ರೂ ನಿಂದ 56000/- ವರೆಗೂ ಹಣ ಪಡೆಯುತ್ತಾರೆ.

ಶುರುವಿನಲ್ಲಿ ಕಾರ್ಮಿಕರನ್ನು ಭೇಟಿ ಮಾಡುವುದು ಕಷ್ಟವಾಯಿತು. ಅವರು ಮಾತನಾಡಲು ಸಿಗುತ್ತಿರಲಿಲ್ಲ. ಯಾವಾಗಲೂ ಅವಸರದಲ್ಲಿರುತ್ತಿದ್ದರು. ಎಡಬಿಡದೆ 15 ದಿವಸಗಳ ಕಾಲ ನಾವು ಮೂವರು ಸ್ನೇಹಿತರು ಅವರನ್ನು ಹಿಂಬಾಲಿಸಿದ್ದಕ್ಕೆ 16ನೇ ದಿನ ಅವರು ನಾವು ಕೈ ಬೀಸಿದಾಗ ವಾಪಸ್ಸು ನಮ್ಮತ್ತ ಕೈ ಬೀಸಿದರು ಇಪ್ಪತ್ತು ದಿನಗಳಾದ ಮೇಲೆ ನಾವು ಮುಷ್ಠಿ ತೋರಿಸಿದೆವು. ಒಂದು ತಿಂಗಳ ನಂತರ ಅವರು ವಾಪಸ್ಸು ಮುಷ್ಠಿ ತೋರಿಸಿದರು. ಶುರುವಿನಲ್ಲಿ ಅವರು ನಮ್ಮನ್ನು ನಂಬುತ್ತಿರಲಿಲ್ಲ. ನಿಧಾನವಾಗಿ ಮಾತನಾಡಲು ಪ್ರಾರಂಭಿಸಿದರು. ಹೆಚ್ಚಿನ ಕಾರ್ಮಿಕರು ಮಹಾರಾಷ್ಟ್ರದ ಬಡ ಪೀಡಿತ ಪ್ರದೇಶದಿಂದ ಬಂದ ಬಡವರು. ನಿರಕ್ಷರಸ್ಥರು. ನಾವು ಅವರ ಜೊತೆ ಕಸ ಸುರಿಯುವ ಸ್ಥಳಕ್ಕೆ ಹೋಗಿ 10 ರಿಂದ 6 ಗಂಟೆಯವರೆಗೂ ನಿಲ್ಲುತ್ತಿದ್ದೆವು. ಕಸದ ಧೂಳಿನಲ್ಲಿ ಅವರಂತೆ ಕಾಣುತ್ತಿದ್ದೆವು. ಮಾತನಾಡಿಸಿ ಹೆಸರು, ವಿಳಾಸ ಪಡೆದುಕೊಂಡೆವು. ಅಲ್ಲಿದ್ದ ತಮಿಳು ಕೆಲಸಗಾರರಿಗೆ ತಮಿಳು ಬಿಟ್ಟು ಬೇರೆ ಭಾಷೆ ಬರುತ್ತಿರಲಿಲ್ಲ. ನಾವು ತಮಿಳು ಕಲಿತುಕೊಂಡೆವು. ನಿಂಗ ಪೇರೆನ್ನಾ ? ನಿಂಗ ಎಂಗಲಿಂದ ವಂದಿರ್ಕೆ ? ವೀಡು ಎಂಗ ? ಅಂತ ಕೇಳಲು ಕಲಿತುಕೊಂಡೆವು ಒಬ್ಬ ಕಾರ್ಮಿಕ ಮೊದಲು ನನ್ನ ಹೆಸರು ಆರ್.ಸುಬ್ರಮಣಿ ಎಂದ. ಆ ಮೇಲೆ ಆರ್.ಸುಬ್ರಮಣಿಯನ್ ಅಂದ, ಮುಂದೆ ಸುಬ್ರಮಣಿಯನ್ ರಾಮ ಸ್ವಾಮಿ ಎಂದು ಪೂರ್ತಿ ಹೆಸರು ಹೇಳಿದ.

ಅವರೆಲ್ಲ ಸಂಘ ಮಾಡಲು ಹೆದರುತ್ತಿದ್ದರು. ಖಾಯಂ ನೌಕರರಲ್ಲದ ಕಾರಣ ಯಾವ ಸೌಲಭ್ಯಗಳನ್ನು, ಕನಿಷ್ಟ ಕುಡಿಯುವ ನೀರನ್ನು ಪಡೆಯಲು ಸಹ ಅರ್ಹರಲ್ಲ ಎಂದು

ಅವರು ಭಾವಿಸಿದ್ದರು. ಅವರ ಹಕ್ಕುಗಳ ಬಗ್ಗೆ ತಿಳಿಸಲು, ಸೌಲಭ್ಯಗಳ ಕುರಿತು ತಿಳಿಸಲು, ಸಂಘ ಕಟ್ಟಲು ಸುಮಾರು 9 ತಿಂಗಳು ಹಿಡಿಯಿತು. ಮೊದಲಿಗೆ ಕುಡಿಯುವ ನೀರಿಗೆ ಹೋರಾಟ ಮಾಡಿದೆವು. ಕಸ ಸುರಿಯುವ ಸ್ಥಳದಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಇರಲಿಲ್ಲ. ಮೂರು ದಿನಗಳ ಕಾಲ ಉಪವಾಸ ಕೂತು ಪ್ರತಿಭಟಿಸಿದ್ದಕ್ಕಾಗಿ ಕುಡಿಯುವ ನೀರಿನ ವ್ಯವಸ್ಥೆಯಾಯಿತು. ಅದು ನಮಗೆ ಸಿಕ್ಕ ಮೊದಲ ವಿಜಯ. ನಂತರ ನಾವು ಮೆಡಿಕಲ್ ಕ್ಯಾಂಪುಗಳನ್ನು ಮಾಡಿದೆವು. ಕ್ಯಾಂಪಿನ ಉದ್ಘಾಟನೆಯನ್ನು ಚೀಫ್ ಇಂಜಿನಿಯರ್ ಅವರಿಂದ ಮಾಡಿಸಿದೆವು. ಅವರಿಗೆ ಇದು ಯೂನಿಯನ್ ಕೆಲಸವೆಂದು ಗೊತ್ತಿರಲಿಲ್ಲ. ಮುನಿಸಿಪಲ್ ಆಸ್ಪತ್ರೆಯ ವೈದ್ಯರುಗಳು, ದೊಡ್ಡ ಆಸ್ಪತ್ರೆಗಳ ವೆದ್ಯರನ್ನು ಆರೋಗ್ಯ ತಪಾಸಣೆಗೆ ಕರೆತಂದೆವು. ಚರ್ಮದ ಖಾಯಿಲೆ ವಿಪರೀತವಿತ್ತು. ವೈದ್ಯರುಗಳು ನೀಡಿದ ವರದಿಯನ್ನು ದಾಖಲೆ ಮಾಡಿದೆವು. ಇಂತಹ ಹಲವಾರು ಕ್ಯಾಂಪುಗಳನ್ನು ಮಾಡಿದೆವು. ಕೆಲಸದ ವೇಳೆಯಲ್ಲಿ ಅಪಘಾತವಾದಾಗ ಚಿಕಿತ್ಸೆಗೆ ಮೊದಲು ಪೋಲಿಸ್ ಠಾಣೆಯಲ್ಲಿ ದೂರು ದಾಖಲು ಮಾಡಿ ಹೆಸರು, ಕೆಲಸಮಾಡುತ್ತಿರುವ ಸಂಸ್ಥೆ, ಸ್ಥಳ ಬರೆಸುತ್ತಿದ್ದೆವು. ಕಸವನ್ನು ಟ್ರಕ್ಕಿನಲ್ಲಿ ಸಾಗಿಸುವಾಗ ಸಿಗ್ನಲ್‌ಗಳನ್ನು ಜಂಪ್ ಮಾಡಲು ಹೇಳಿದೆವು. ಜಂಪ್ ಮಾಡಿದಾಗ ಪೋಲಿಸರು ಹಿಡಿಯುತ್ತಿದ್ದರು. ವಿವರ ಕೇಳಿದಾಗ ಹೆಸರು, ಕೆಲಸದ ವಿವರ ನೀಡುತ್ತಿದ್ದೆವು. ಟ್ರಕ್ ಯಾರದು, ಲೈಸೆನ್ಸ್ ಇದೆಯಾ ಎಲ್ಲವೂ ಪೋಲಿಸರ ಬಳಿ ದಾಖಲಾಗುತ್ತಿದ್ದವು. ಯಾವ ಟ್ರಕ್ಕಿಗೂ, ಗುತ್ತಿಗೆದಾರರಿಗೂ ಲೈಸನ್ಸ್ ಇಲ್ಲದಿರುವುದು ನಮಗೆ ತಿಳಿಯಿತು. ಇವೆಲ್ಲಾ ದಾಖಲೆಗಳನ್ನು ಬಳಸಿಕೊಂಡು ಹೈಕೋರ್ಟಿಗೆ ಹೋದೆವು. ಮೊದಲು ಯಾವ ಕಾರ್ಮಿಕರದು ದಾಖಲೆ ಇರಲಿಲ್ಲ. ಅಪಘಾತವಾಗಲಿ, ಸಾವಾಗಲಿ ನಮ್ಮ ಕೆಲಸಗಾರರಲ್ಲ ಎಂದು ಗುತ್ತಿಗೆದಾರರು ಜಾರಿಕೊಳ್ಳುತ್ತಿದ್ದರು. ದಾಖಲೆಗಳನ್ನು ನಿರ್ಮಿಸಿದ ಮೇಲೆ ಕಾರ್ಮಿಕ ಆಯುಕ್ತರನ್ನು ಸಂಪರ್ಕಿಸಿ ದೂರು ನೀಡಿ ಸರ್ವೇ ಮಾಡಲು ಹೇಳಿದರವು. 38 ಜನ ಇನ್‌ಸ್ಪೆಕ್ಟರ್‌ಗಳು ಕಸ ಸುರಿಯುವ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಿ ಪ್ರತಿಯೊಬ್ಬ ಕಾರ್ಮಿಕರ ವಿವರಗಳನ್ನು ದಾಖಲಿಸಿದರು. ಈ ದಾಖಲೆಗಳನ್ನು ಕೋರ್ಟಿನಲ್ಲಿ ಬಳಸಿಕೊಂಡೆವು.

ಶೇಖರ್ ಸುಂದರಂ ಎಂಬ ಕಾರ್ಮಿಕನೊಬ್ಬ ಅಪಘಾತದಲ್ಲಿ ಸತ್ತು ಹೋದ. ಅವನ ಹೆಂಡತಿ ಅನಕ್ಷರಸ್ಥೆ. ಸಂಘ ಪ್ರಾರಂಭವಾದ ಮೇಲೆ ಆದ ಮೊದಲ ಸಾವದು. ದಾಖಲೆ ಇಲ್ಲದ ಕಾರಣ ಅವನು ನಮ್ಮ ಕೆಲಸಗಾರನಲ್ಲವೆಂದು ಜಾರಿಕೊಂಡರು. ನಾವು ಪಟ್ಟು ಬಿಡದೆ ಹೆಣವನ್ನಿಟ್ಟುಕೊಂಡು ಕಾರ್ಮಿಕರು ಧರಣಿ ಕೂತು ಪ್ರತಿಭಟಿಸಿದೆವು. 15 ಆಗಸ್ಟ್ 1997ರಂದು ಸ್ವಾತಂತ್ರ್ಯ ದಿನಾಚರಣೆಯಂದು ರಜೆ ನೀಡಬೇಕೆಂದು ಮುಷ್ಕರ ಹೂಡಿದೆವು. ಮುಖ್ಯ ಮಂತ್ರಿಗಳು ಧ್ವಜಾರೋಹಣಕ್ಕೆ ಬರುವವರಿದ್ದರಿಂದ ಪೋಲಿಸರಿಗೆ ನಮ್ಮ ಮೇಲೆ ತುಂಬಾ ಸಿಟ್ಟು ಬಂದಿತ್ತು. ನಮ್ಮ ಪ್ರತಿಭಟನೆಯಿಂದಾಗಿ ಆಗಸ್ಟ್ 15 ರಂದು ನಮಗೆ ರಜೆ ಸಿಕ್ಕಿತು.

ಸಂಘ ಕಟ್ಟಲು ಪ್ರಯತ್ನಿಸಿದ ನಾನು ಮತ್ತು ನನ್ನಿಬ್ಬರು ಸ್ನೇಹಿತರಿಗೆ ಬೆದರಿಕೆಗಳು ಬರತೊಡಗಿದವು. ಕಾರ್ಮಿಕರಿಗೂ ಬೆದರಿಕೆಗಳು ಬರತೊಡಗಿದವು. ಸಂಘದ ಬೆಳವಣಿಗೆಯು ನಿಧಾನವಾಗಿ ನಡೆಯುತಿತ್ತು. ನಾವು ವಿರೋಧಿಸುತ್ತಿದ್ದ ಜನರು ಶ್ರೀಮಂತರು, ಬಲಾಢ್ಯರು ಮತ್ತು ಭ್ರಷ್ಟರು, ಅವರ ಸಾಮರ್ಥ್ಯ ವನ್ನು ಬಳಸಿಕೊಂಡು ನಮ್ಮನ್ನು ಬೆದರಿಸುತ್ತಿದ್ದರು. ಕಳ್ಳ ಸಾಗಣಿಕೆದಾರ ಹಾಜಿ ಮಸ್ತಾನ್ ಕಳ್ಳ ಸಾಗಣಿಕೆ ಬಿಟ್ಟ ನಂತರ ಗುತ್ತಿಗೆ ಪಡೆದುಕೊಂಡಿದ್ದ. ಅವನ ಚೇಲಾಗಳನ್ನು ಬಿಟ್ಟು ಬೆದರಿಸುತ್ತಿದ್ದರು. ಸಂಘವನ್ನು ಮುರಿಯಲು ಪ್ರಯತ್ನಿಸುತ್ತಿದ್ದರು. ಕಂಟ್ರಾಕ್ಟರ್ ಸಂಘದವರು ನಮ್ಮನ್ನು ಮುರಿಯಲು ಪ್ರಯತ್ನಿಸುತ್ತಿದ್ದರು. ಕಂಟ್ರಾಕ್ಟರ್‌ನ ತಮ್ಮನೊಬ್ಬ 'ಸಾಯಿಬಾಬ ಶ್ರಮಿಕ ಸಂಘ' ಸ್ಥಾಪಿಸಿ ಕಾರ್ಮಿಕರ ಸಂಘವನ್ನು ಮುರಿಯಲು ನೋಡಿದ. ಅವನ ಸಂಘದ ವತಿಯಿಂದ ಎಲ್ಲ ಕಾರ್ಮಿಕರಿಗೂ ಟೋಪಿಯನ್ನ ನೀಡಿ ಸಹಿ ಪಡೆದುಕೊಂಡು 'ನೋಡಿ ನಮ್ಮ ಸಂಘದವರು ಕಾರ್ಮಿಕರಿಗೆ ಟೋಪಿ ನೀಡಿದ್ದೇವೆ ನಿಮ್ಮ ಸಂಘದವರು ಏನು ಕೊಟ್ಟಿದ್ದಾರೆ? ಎಂದು ಹೇಳಿಕೊಂಡು ತಿರುಗುತ್ತಿದ್ದರು. ಆದಾಗಲೆ ನಮ್ಮ ಸಂಘ ಶುರುವಾಗಿ 1½ ವರ್ಷವಾಗಿತ್ತು. ಆದ್ದರಿಂದ ಕಾರ್ಮಿಕರು ಸುಲಭವಾಗಿ ನಂಬಲಿಲ್ಲ ಅವರು ಟೋಪಿಕೊಟ್ಟು ಸಹಿ ಪಡೆದ ದಾಖಲೆ ಇಟ್ಟುಕೊಂಡು ಅವರ ಸಂಘವನ್ನು ರೆಜಿಸ್ಟರ್ ಮಾಡಲು ಹೊರಟಿದ್ದರು. ನಾವೂ ಸಹ ಟೋಪಿಗಷ್ಟೇ ಸಹಿ ಹಾಕಿದ್ದು ರೆಜಿಸ್ಟೇಶನ್ ಮಾಡಿಸಲು ಅಲ್ಲ ಅಂತ ಎಲ್ಲ ಕಾರ್ಮಿಕರ ಸಹಿ ಹಾಕಿಸಿ ರೆಜಿಸ್ಟರ್ ಆಗದಂತೆ ತಡೆದೆವು. ಶಿವಸೇನೆಯ ಸದಸ್ಯರು ಸಂಘ ಮಾಡಲು ಬಂದರು. ಶಿವಸೇನೆಯ ಕಾರ್ಪೊರೇಟರ್ ಒಬ್ಬ ಇದ್ದ. ಅವರ ಜೊತೆ ಐದು ಜನ ಗನ್ ಮ್ಯಾನಗಳು

ಬಂದು 45 ಲಕ್ಷದ ಕಂಟ್ರಾಕ್ಟ್ ತೆಗೆದುಕೊಳ್ಳಲು ಸಹಾಯ ಮಾಡಿದರೆ ನಮಗೆ 5 ಲಕ್ಷ ನೀಡುವುದಾಗಿ ಹೇಳಿದರು. ನಾವು ಕರಪತ್ರ ಹಾಕಿಸಿ 'ಕಸ ಸುರಿಯುವ ಸ್ಥಳದಲ್ಲಿ ನಮ್ಮನ್ನು ಐದು ಲಕ್ಷಕ್ಕೆ ಶಿವಸೇನೆಯವರು ಹಾರಾಜು ಹಾಕಲಿದ್ದಾರೆಂದು' ಪ್ರಚಾರ ಮಾಡಿದೆವು.

1997ರಲ್ಲಿ ಮಳೆಗಾಲದಲ್ಲಿ ಮಳೆಕೋಟು, ಗಂಬೂಟ್ ನೀಡಬೇಕೆಂದು ಪ್ರತಿಭಟನೆ ಮಾಡಿದೆವು. ಮಂತ್ರಿಗಳನ್ನು ಕಸ ಸುರಿಯುವ ಸ್ಥಳಕ್ಕೆ ಕರೆ ತಂದು ಪರಿಸ್ಥಿತಿಯನ್ನು ತೋರಿಸಿದಾಗ ಅವರು ಮಳೆಕೋಟು ಮತ್ತು ಗಂಬೂಟ್‌ಅನ್ನು ನೀಡಲು ಆದೇಶ ಮಾಡಿದರು. ಮತ್ತೊಬ್ಬ ಕಾರ್ಮಿಕ ಸತ್ತಾಗ ಮತ್ತೆ ಅವನು ನಮ್ಮ ಕಾರ್ಮಿಕನೆಂಬ, ದಾಖಲೆ ಇಲ್ಲ ಎಂದರು. ನಾವು ಕಾರ್ಪೊರೇಷನ್ ಕಛೇರಿ ಮುಂದೆ ಹೆಣವಿಟ್ಟು ಪ್ರತಿಭಟಿಸಿದೆವು. ಈ ಹೆಣ ಕಾರ್ಪೊರೇಷನ್‌ದಲ್ಲ, ಸಂಘದ್ದೂ ಅಲ್ಲ. ಅದು ಬೀದಿ ಕಸ ನೀವೆ ತೊಟ್ಟಿಗೆ ಹಾಕಿ ಎಂದು ಎಲ್ಲ ಕಾರ್ಮಿಕರು ಕೂಗಿದ್ದರು. 'ಕಮಿಷನರ್ ಹಾಯ್ ಹಾಯ್', 'ಕಾರ್ಪೊರೇಟರ್ ಹಾಯ್ ಹಾಯ್' ಎಂದು ಘೋಷಣೆ ಹಾಕಿದೆವು. ಮಾಧ್ಯಮದ ಜನರೆಲ್ಲ ಬಂದಿದ್ದರು. ಆಗ ಕಮಿಷನರ್ ಅವರು ಹೊರ ಬಂದು ಪರಿಹಾರ ಘೋಷಿಸಿದರು.

ನಿರಂತರವಾಗಿ ನಡೆಯ ಬೇಕಾದ ಕೆಲಸವನ್ನು ಗುತ್ತಿಗೆಗೆ ನೀಡಬಾರದೆಂಬ ಆಧಾರದ ಮೇಲೆ ಹೈಕೋರ್ಟಿಗೆ ಹೋದೆವು. ಖಾಯಂ ನೌಕರರಿಗೆ 6000/- ರೂ ಸಂಬಳ ಸಿಕ್ಕರೆ ಗುತ್ತಿಗೆ ನೌಕರರಿಗೆ ರೂ 1800/- ಸಿಗುತ್ತಿತ್ತು. ಒಂದೂ ರಜೆ ಇರಲಿಲ್ಲ. 1998 ರಲ್ಲಿ ಗುತ್ತಿಗೆ ಅವಧಿಯು ಮುಗಿದು ಹೊಸ ಗುತ್ತಿಗೆ ಪ್ರಾರಂಭವಾಗುತ್ತಿತ್ತು. ಆ ಸಮಯದಲ್ಲಿ ನಾವು ನಮ್ಮ ಹೋರಾಟವನ್ನು ಚುರುಕು ಗೊಳಿಸಿದೆವು. ಗುತ್ತಿಗೆ ಬದಲಾದಾಗ ಅದೇ ಕಾರ್ಮಿಕರೇ ಮುಂದುವರೆಯ ಬೇಕೆಂದು 1998 ಮೇ ನಲ್ಲಿ ಮುಂಬೈನ ಹೈಕೋರ್ಟು ಮಧ್ಯಂತರ ಆದೇಶ ನೀಡಿತು. ಬಾಂಬೆ ಮುನಿಸಿಪಲ್ ಕಾರ್ಪೊರೇಷನ್ ಈ ಆದೇಶವನ್ನು ಸುಪ್ರಿಂಕೋರ್ಟ್‌ನಲ್ಲಿ ಪ್ರಶ್ನಿಸಿತು. ಸುಪ್ರಿಂಕೋರ್ಟ್ ಸಹ ಆದೇಶವನ್ನು ಎತ್ತಿ ಹಿಡಿಯಿತು. 1999 ರಲ್ಲಿ ಗುತ್ತಿಗೆ ಪದ್ಧತಿಯನ್ನು ರದ್ದುಗೊಳಿಸಲಾಯಿತು. ಗುತ್ತಿಗೆದಾರರು ಕಾರ್ಮಿಕರರನ್ನು ಓಡಿಸುವುದಾಗಿ ಹೇಳಿದ್ದರು. ಕೊನೆಗೆ ಅವರೇ ಹೋಗಬೇಕಾಯಿತು. ಈ ಆದೇಶ ದೇಶದೆಲ್ಲೆಡೆ ತಲುಪ ಬೇಕೆಂದು ನಾವು ಓಡಾಡುತ್ತಿದ್ದೇವೆ.

ನ್ಯೂ ಬಾಂಬೆ ಮುನಿಸಿಪಲ್ ಕಾರ್ಪೊರೇಷನ್, ನಾಸಿಕ್ ಮುನಿಸಿಪಲ್ ಕಾರ್ಪೋರೇಷನ್, ಚೆನ್ನೈ ಮುನಿಸಿಪಲ್ ಕಾರ್ಪೊರೇಷನ್ ಹೀಗೆ ಹಲವು ನಗರಗಳೊಂದಿಗೆ ಸಂಪರ್ಕ ಸಾಧಿಸಿದ್ದೇವೆ. ಚೆನ್ನೈನಲ್ಲಿ ಆಸ್ಟ್ರೇಲಿಯಾದ ಕಂಪೆನಿಯೊಂದು ಗುತ್ತಿಗೆ ತೆಗೆದುಕೊಂಡಿದೆ. ಆ ಕಂಪೆನಿಯವರು ಫ್ರಾನ್ಸ್ ಕಂಪೆನಿಯೊಂದಕ್ಕೆ ಉಪ-ಗುತ್ತಿಗೆ ನೀಡಿದ್ದಾರೆ. ಅಲ್ಲಿ ಸ್ವಚ್ಛತೆಯ ಕೆಲಸ ಮಾಡುವವರೆಲ್ಲರೂ ಆದಿದ್ರಾವಿಡರು. ಆಸ್ಟ್ರೇಲಿಯಾದ ಕಂಪೆನಿಯು ಚೆನ್ನೈನ ಕೆಲವು ಭಾಗಗಳಲ್ಲಿ ಕೆಲಸ ಮಾಡುತ್ತಿದೆ. ನಿಧಾನವಾಗಿ ವಿಸ್ತಾರ ಮಾಡಲು ಯೋಚಿಸುತ್ತಿದ್ದಾರೆ. ಕೆಲಸವನ್ನು ಯಾಂತ್ರೀಕೃತಗೊಳಿಸ -ಲಾಗಿದೆ. ಕೆಲಸಗಾರರಿಗೆಗ್ಲೌಸ್, ಮಾಸ್ಕ್, ಗಂಬೂಟ್ಸ್, ಸಮವಸ್ತ್ರ ನೀಡಿದ್ದಾರೆ. ಯಾವ ಕೆಲಸವನ್ನೂ ಅವರು ನೇರವಾಗಿ ಕೈಯಲ್ಲಿ ಮಾಡುವುದಿಲ್ಲ. ಸಂಘವನ್ನೂ ಸಹ ಮ್ಯಾನೇಜ್‌ಮೆಂಟಿನವರೇ ಮಾಡಿದ್ದಾರೆ! ಸುಮಾರು ಏಳು ವರ್ಷಗಳಿಂದ ಗುತ್ತಿಗೆ ಕೆಲಸಗಾರರಾಗಿ ದುಡಿಯುತ್ತಿರುವ ಕಾರ್ಮಿಕರಿಗೆ ಗುತ್ತಿಗೆ ಕಾರ್ಮಿಕ ಕಾಯ್ದೆಯಾಗಲಿ, ಪರಿಶಿಷ್ಟ ಜಾತಿ / ಪಂಗಡ ದೌರ್ಜನ್ಯ ಕಾಯ್ದೆಯಾಗಲಿ ತಿಳಿದಿರಲಿಲ್ಲ. ಪ್ರಭುತ್ವವು ಯಾವತ್ತೂ ಕಾರ್ಮಿಕರನ್ನು ಕತ್ತಲಲ್ಲಿ ಇಡಬಯಸುತ್ತದೆ.

ಐದು ಮುಖ್ಯ ನಗರಗಳಲ್ಲಿ ಹೊಸ ರೀತಿ ಕಸ ವಿಲೇವಾರಿ ಮಾಡ ಬೇಕೆಂಬ ಹಿನ್ನಲೆಯಲ್ಲಿ ಬೆಂಗಳೂರಿನಿಂದ ಅಲ್‌ಮಿತ್ರಾ ಪಟೇಲ್ ಎಂಬುವವರು ಸುಪ್ರಿಂ ಕೋರ್ಟಿಗೆ ಹೋಗಿದ್ದರು. ಸ್ವಚ್ಛತೆ ಕಾರ್ಯದಲ್ಲಿ ಗುತ್ತಿಗೆ ಕೆಲಸದಲ್ಲಿ ತೊಡಗಿರುವವರೆಲ್ಲರೂ ದಲಿತರು. ಗುತ್ತಿಗೆ ಕಾರ್ಮಿಕ ಕಾಯ್ದೆ ಮತ್ತು ಪರಿಶಿಷ್ಟ ಜಾತಿ/ಪಂಗಡ ದೌರ್ಜನ್ಯ ಕಾಯ್ದೆಗಳಿದ್ದರೆ ಅವರೆಲ್ಲ ದಕ್ಷತೆಯಿಂದ ಕಾರ್ಯನಿರ್ವಹಿಸುವ ಬದಲು ಅವುಗಳನ್ನು ಉಪಯೋಗಿಸಿಕೊಂಡು ಸರಿಯಾಗಿ ಕೆಲಸ ನಿರ್ವಹಿಸುವುದಿಲ್ಲ ಆದ್ದರಿಂದ ಈ ಎರಡೂ ಕಾಯ್ದೆಗಳನ್ನು ಗುತ್ತಿಗೆ ಪೌರಕಾರ್ಮಿಕರಿಗೆ ಅನ್ವಯಿಸದಂತೆ ಮಾಡಬೇಕೆಂದು ಆಕೆ ಸುಪ್ರಿಂ ಕೋರ್ಟಿಗೆ ಹೋಗಿದ್ದರು. ಆ ಸಂದರ್ಭದಲ್ಲಿ ಪಾಲಿಕೆಯ ಆಯುಕ್ತರಾಗಿದ್ದ ಅಶೋಕ ದಳವಾಯಿಯವರು ಪಾಲಿಕೆಯನ್ನು ಪ್ರತಿನಿಧಿಸುತ್ತಿದ್ದರು. ಒಬ್ಬರೂ ಖಾಯಂ ನೌಕರರು ಇರಬಾರದೆಂಬುದು ಅವರ ನಿಲುವಾಗಿತ್ತು. ಅಟಲ್ ಬಿಹಾರಿ ವಾಜಪೇಯಿಯವರು ಇರುವುದು ನಮಗಲ್ಲ. ನಮ್ಮ ಸಂಘಟನೆಯೇ ನಮ್ಮ ಶಕ್ತಿ ಎಂಬುದನ್ನು ಅರಿತುಕೊಳ್ಳ ಬೇಕು.

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ**

**ಸಂಸ್ಥೆಗಳಿಗೆ : 100 ರೂ**

ಸಂ. ಮಂಡಳಿ



REGD No. : CPMG/KA/BGE/289/2002

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067